# ಚಂದಮಾಮ


ಸಂಸ್ಥಾಪಕರು : 'ಚಕ್ರಪಾಣಿ'

ಸಂಚಾಲಕರು : ನಾಗಿರೆಡ್ಡಿ


**ಲೋ**ಕದಲ್ಲಿ ಸಾಧಾರಣವಾಗಿ ಲೌಕಿಕ ಶಕ್ತಿಗಳಿಗಿಂತಲೂ ಲೌಕಿಕಕ್ಕೆ ಅತೀತವಾದ ಶಕ್ತಿಗಳೇ ಹೆಚ್ಚಿನವೆಂದು ಹೇಳುತ್ತಾರಾದರೂ ಅದು ನಿಜವೆಂದು ನಂಬಲಿಕ್ಕಾಗದು. ಲೋಕ ವ್ಯವಹಾರಗಳು ನಡೆಯುವುದಕ್ಕೂ, ಜೀವನವು ಮುಂದೆ ಸಾಗುವುದಕ್ಕೂ ಸಹಜವಾದ ಲೌಕಿಕ ಶಕ್ತಿಗಳೇ ಸಹಾಯವಾಗುವುದಲ್ಲದೆ ಲೌಕಿಕಕ್ಕೆ ಅತೀತವಾದ ಅದ್ಭುತ ಶಕ್ತಿಗಳ ಸಹಾಯದಿಂದಲ್ಲ. ಯಾವ ದೇಶದಲ್ಲಿ ಪ್ರಜೆಗಳು ಹೆಚ್ಚು ಸಂಖ್ಯೆಯಲ್ಲಿ ಮೋಕ್ಷಕ್ಕೆ ಹೋಗುವರೆಂಬುದನ್ನು ಯಾರೂ ಗಣಿಸುವುದಿಲ್ಲ. ಅದು ಮುಖ್ಯವೂ ಅಲ್ಲ. ಯಾವ ದೇಶದ ಪ್ರಜೆಗಳು ಪ್ರಾಪಂಚಿಕವಾಗಿ ಮುಂದೆ ಬಂದಿರುವರೆಂಬುದೇ ಮುಖ್ಯ. ಅದಕ್ಕೆ ಕಾರಣ ಮಾನವರ ಸ್ವಂತ ಶಕ್ತಿಗಳೇ. ಈ ಸಂಚಿಕೆಯ "ಮಾಯಾಸುಧೀರ" ಎಂಬ ಬೇತಾಳ ಕಥೆಯಿಂದ ಈ ವಿಷಯಗಳನ್ನು ತಿಳಿಯಬಹುದು.


ಸಂಪುಟ : ೫೮ ಜನವರಿ '೭೭ ಸಂಚಿಕೆ : ೧

ಬಿಡಿ ಪ್ರತಿ ರೂ. ೧-೨೫ :: ವಾರ್ಷಿಕ ಚಂದಾ ರೂ. ೧೫-೦೦







ಯಸ್ಯಾರ್ಥಾಸ್ತಸ್ಯ ಮಿತ್ರಾಣಿ
ಯಸ್ಯಾರ್ಥಾ ಸ್ತಸ್ಯ ಬಾಂಧವಾಃ
ಯಸ್ಯಾರ್ಥಾಸ್ಸಪುಮಾನ್ ಲೋಕೇ
ಯಸ್ಯಾರ್ಥಾಸ್ಸ ಚ ಪಂಡಿತಃ ೧.

ಧನವಿರುವವನಿಗೇ ಸ್ನೇಹಿತರು, ಧನವಿರುವವನಿಗೇ ಬಂಧುಗಳು, ಧನವಿರುವವನೇ ಪುರುಷ, ಧನವಿರುವವನೇ ಪಂಡಿತ.

ಯಸ್ಯಾರ್ಥಾಸ್ಸ ಚ ವಿಕ್ರಾಂತೋ
ಯಸ್ಯಾರ್ಥಾಸ್ಸ ಚ ಬುದ್ಧಿಮಾನ್
ಯಸ್ಯಾರ್ಥಾಸ್ಸ ಮಹಾಭಾಗೋ
ಯಸ್ಯಾರ್ಥಾಸ್ಸ ಮಹಾಗುಣಃ ೨.

ಧನವಿರುವವನೇ ಪರಾಕ್ರಮಿ, ಅವನೇ ಬುದ್ಧಿವಂತ, ಅವನೇ ಅದೃಷ್ಟವಂತ, ಅವನೇ ಗುಣವಂತ.

ಯಸ್ಯಾರ್ಥಾ ಧರ್ಮಕಮಾರ್ಥಾಃ
ತಸ್ಯ ಸರ್ವಂ ಪ್ರದಕ್ಷಿಣಂ
ಅಧನೇನಾರ್ಥ ಕಾಮೇನ
ನಾರ್ಥಶ್ಶಕ್ಯೋ ವಿಚಿನ್ವತಾ ೩.

ಧನವಿರುವವನಿಗೆ ಧರ್ಮಕಾಮಗಳೆಲ್ಲ ಸಿದ್ಧಿಸುತ್ತವೆ. ಧನವಿಲ್ಲದವನ ಕೋರಿಕೆಗಳು ಹೇಗೂ ಸಿದ್ಧಿಸಲಾರವು.



# ಮಿತ್ರಲಾಭ

೪೨

ತನ್ನ ಗಂಟನ್ನೆತ್ತಿಕೊಂಡು ಸೋಮಿಲಕನು ತನ್ನ ಊರಿಗೆ ಪ್ರಯಾಣ ಹೊರಟನು. ಹಗಲಿಡೀ ನಡೆದು ಸೂರ್ಯಾಸ್ತಮಾನವಾಗುವ ಹೊತ್ತಿಗೆ ಅದೇ ಹಳೆಯ ಆಲದ ಮರವೇ ಅವನ ಇದಿರಿನಲ್ಲಿ ಕಾಣಿಸಿತು. ರಾತ್ರಿ ಅದೇ ಮರವನ್ನಾಶ್ರಯಿಸಿ ಅವನು ವಿಶ್ರಮಿಸಿ ಕೊಂಡಿರುವಾಗ ತನ್ನ ದುಸ್ಥಿತಿಯನ್ನು ಕುರಿತು ನೆನಸಾಯಿತು. ಅದನ್ನೇ ಆಲೋಚಿಸುತ್ತಾ ಅರೆ ನಿದ್ರೆಯಲ್ಲಿರುವಾಗ ಸ್ವಪ್ನ ಕಾಣಲು ತೊಡಗಿತು.

ಆ ಸ್ವಪ್ನದಲ್ಲಿ ಅವನಿಗೆ ಹಿಂದೆ ಕಾಣಿಸಿದ ಅದೇ ಇಬ್ಬರು ದೇವ ವ್ಯಕ್ತಿಗಳು ಕಂಡುಬಂದರು. ಅವರ ಲ್ಲೊಬ್ಬ ಇನ್ನೊಬ್ಬನನ್ನು ಕುರಿತು, "ಎಲೋ ಕರ್ತಾ, ಈ ಸೋಮಿಲಕನಿಗೆ ಐನೂರು ಚಿನ್ನದ ನಾಣ್ಯಗಳನ್ನು ಏಕೆ ಕೊಟ್ಟೆ?" ಎಂದು ಕೇಳಿದ. ಅದಕ್ಕೆ ಎರಡನೆ ಯವನು, "ಎಲೈ ಕರ್ಮನೇ, ಅವನ ಕೆಲಸಕ್ಕೆ ತಕ್ಕ ಫಲವನ್ನು ಕೊಡುವುದು ನನ್ನ ಧರ್ಮ. ಬೇಡದಿದ್ದರೆ ನೀನೇ ತೆಗೆದುಕೋ." ಎಂದನು.

ಈ ಮಾತು ಕೇಳಿ ಸೋಮಿಲಕನಿಗೆ ಗಾಬರಿ ಯಾಯಿತು. ತಟ್ಟನೆ ಕಣ್ಣು ತೆರೆದು ತನ್ನ ಹಣದ ಮೂಟೆ ಖಾಲಿಯಾಗಿ ಹೋದುದನ್ನು ತಿಳಿದು, "ಅಯ್ಯಯ್ಯೋ! ಇದೆಂತಹ ನನ್ನ ವಿಧಿಯೋ! ಕವಡೆ ಕಾಸಿಗೂ ಉಪಯೋಗವಿಲ್ಲದ ನಾನು ಬದು ಕಿದ್ದು ಪ್ರಯೋಜನವೇನಿದೆ? ಈ ಆಲದ ಮರಕ್ಕೇ ಉರುಳು ಹಾಕಿಕೊಳ್ಳುತ್ತೇನೆ." ಎಂದುಕೊಂಡನು.

ಕೂಡಲೇ ಅವನು ಆ ಪ್ರಾಂತದಲ್ಲಿ ಬೆಳೆದಿದ್ದ ದರ್ಭೆ ಹುಲ್ಲುಗಳನ್ನು ಕಿತ್ತು ಹೊಸೆದು ಹಗ್ಗವನ್ನಾಗಿ ಮಾಡಿ, ಅದಕ್ಕೆ ಉರುಳು ಕಟ್ಟಿ, ಇನ್ನೊಂದು ಕೊನೆ ಯನ್ನು ಮರದ ಕೊಂಬೆಗೆ ಕಟ್ಟಿ, ಉರುಳಿನೊಳಗೆ ಕುತ್ತಿಗೆ ಹೊಗಿಸಿ ಹಾರಲು ತಯಾರಾದನು. ಆಗ ಆಕಾಶದಲ್ಲಿ ದಿವ್ಯ ಸ್ವರೂಪದವನೊಬ್ಬನು ಪ್ರತ್ಯಕ್ಷ ನಾಗಿ, "ಸೋಮಿಲಕಾ! ತಡೆ, ಪ್ರಾಣಾಘಾತ ಮಾಡಿ ಮಾಡಿಕೊಳ್ಳಬೇಡ. ನಿನ್ನ ಚಿನ್ನದ ನಾಣ್ಯಗಳನ್ನು ತೆಗೆದುಕೊಂಡ ಕರ್ತನು ನಾನೇ. ನಿನಗೀಗ ನನ್ನ ಪ್ರತ್ಯಕ್ಷ ದರ್ಶನವಾಯಿತು. ಇದರ ಫಲವು ನಿನಗೆ ಸಿಕ್ಕೇಸಿಗುತ್ತೆ. ಕರ್ಮಫಲ ಪ್ರಾಪ್ತಿಗಾಗಿ ನೀನು ಮಾಡಿದ ಕಾರ್ಯವನ್ನು ಮೆಚ್ಚುತ್ತೇನೆ. ಏನು ವರ ಬೇಕೋ ಕೇಳು, ಕೊಡುತ್ತೇನೆ" ಎಂದನು.

ಹಿಂಬದಿಯ ಚಿತ್ರಕಥೆ



"ಹಾಗಾದರೆ ನನಗ ಅಪಾರವೆನಿಸುವಷ್ಟು ಸಂಪತ್ತನ್ನು ಪ್ರಸಾದಿಸು" ಎಂದ ಸೋಮಿಲಕ.

"ಮಿತ್ರನೇ, ನಿನ್ನ ವಿಧಿಯಲ್ಲಿ ತಿಂಡಿ ಬಟ್ಟೆಗಳ ಹೊರತು ಬೇರೇನೂ ಪ್ರಾಪ್ತಿ ಇಲ್ಲದಿರುವಾಗ ಅಪಾರವಾದ ಸಂಪತ್ತನ್ನು ಹೇಗೆ ಅನುಭವಿಸುವಿ?" ಎಂದು ಪ್ರಶ್ನೆ ಮಾಡಿದ ಕರ್ತ.

"ಹೇಗಾದರೂ ಅನುಭವಿಸುತ್ತೇನೆ. ನನಗೆ ಸಂಪತ್ತನ್ನು ಪ್ರಸಾದಿಸಿಬಿಡು" ಎಂದ ಸೋಮಿಲಕ.

"ಸರಿ. ನೀನು ವರ್ಧಮಾನಪುರಕ್ಕೆ ಇನ್ನೊಮ್ಮೆ ಹೋಗು. ಅಲ್ಲಿ ಧನಗುಪ್ತ ಮತ್ತು ಗುಪ್ತಧನ ಎಂಬ ಹೆಸರಿನ ಇಬ್ಬರು ವರ್ತಕರಿದ್ದಾರೆ. ಅವರಿಬ್ಬರ ಸ್ವಭಾವಗಳನ್ನು ಅರಿತುಕೊಂಡು, ಅವರಲ್ಲಿ ಯಾರ ಹಾಗೆ ಇರಲು ಇಷ್ಟಪಡುವಿ ಎಂಬುದನ್ನು ಹೇಳು. ಆಗ ನಿನ್ನ ಕೋರಿಕೆ ತೀರಿಸುತ್ತೇನೆ" ಎಂದು ಹೇಳಿ ಕರ್ತನೆಂಬ ಆ ದಿವ್ಯ ಪುರುಷನು ಅಂತರ್ಧಾನನಾದನು. ಸೋಮಿಲಕನು ವರ್ಧಮಾನ ಪುರಕ್ಕೆ ಹಿಂದಿರುಗಿದನು.

ಅಲ್ಲಿ ಬಹಳ ಕಷ್ಟಪಟ್ಟು ಧನಗುಪ್ತನ ಮನೆ ಎಲ್ಲಿರುವುದೆಂಬುದನ್ನು ಕಂಡುಹಿಡಿದು ಅಲ್ಲಿಗೆ ಹೋದನು. ಧನಗುಪ್ತನೆಂದರೆ ಯಾರೆಂದು ಅನೇಕ ಮಂದಿಗೆ ಗೊತ್ತಿರಲಿಲ್ಲ. ಕಾರಣವೇನೆಂದರೆ, ಅವನು ದಾನಧರ್ಮಗಳಿಗಾಗಲಿ, ವಿನೋದಗಳಿಗಾಗಲಿ, ಕುರುಡು ಕಾಸು ಖರ್ಚು ಮಾಡುವವನಲ್ಲ.

ಸೋಮಿಲಕನು ಹೋಗಿ ಆ ಮನೆಯ ಜಗಲಿಯ ಮೇಲೆ ಕುಳಿತುಕೊಂಡನು. ಅದು ಸರಿಯಾಗಿ ಊಟದ ಹೊತ್ತು. ಧನಗುಪ್ತನು ಮನೆಯಲ್ಲಿರಲಿಲ್ಲ. ಅವನ ಹೆಂಡತಿಯೂ ಮಕ್ಕಳೂ ಬಂದು ಜಗಲಿಯಲ್ಲಿ ಕುಳಿತ ಸೋಮಿಲಕನನ್ನು ಹೊರಡಿಸಲು ಪ್ರಯತ್ನಪಟ್ಟರು. ಆದರೆ ಸೋಮಿಲಕನು ಗಟ್ಟಿಯಾಗಿ ಕುಳಿತು, "ನಾನು ಸಂಜೆಯವೇಳೆಯಲ್ಲಿ ನಡೆದು ದಣಿದು ಬಂದ ಅತಿಥಿ. ನನಗೆ ಊಟಹಾಕ ಬೇಕಾದುದು ನಿಮ್ಮ ವಿಧ್ಯುಕ್ತ ಧರ್ಮ" ಎಂದನು.

ಸ್ವಲ್ಪ ತಕರಾರು ನಡೆದ ಮೇಲೆ ಉಪಾಯವಿಲ್ಲದೆ ಆ ಮನೆಯವರು ಅವನಿಗೆ ಊಟ ಬಡಿಸಿದರು. ಅದು ಬಲುಹೀನವಾದ ಊಟ. ಅಂತಹ ಊಟ ಮಾಡಿದ ಸೋಮಿಲಕನಿಗೆ ಬೇಗದಲ್ಲೇ ನಿದ್ದೆ ಬಂತು. ಅವನ ಸ್ವಪ್ನದಲ್ಲಿ ಅದೇ ಕರ್ಮಕರ್ತ ದೇವತೆಗಳು ಕಾಣಿಸಿ, ಗುಟ್ಟಾಗಿ ಮಾತಾಡಿಕೊಂಡರು.

"ಎಲೋ ಕರ್ತನೇ, ಪಾಪ, ಈ ಧನಗುಪ್ತನಿಗೆ ಈ ಭೋಜನದ ಖರ್ಚನ್ನು ಏತಕ್ಕೆ ಉಂಟುಮಾಡಿದೆ? ಇದು ಬಹಳ ಅನುಚಿತ" ಎಂದನು. "ಕರ್ಮನೇ, ಅದು ನನ್ನ ತಪ್ಪೇನಲ್ಲ. ಈ ಪ್ರತ್ಯೇಕ ಖರ್ಚನ್ನು ಸರಿಗೊಳಿಸುವ ಭಾರ ನಿನ್ನದು" ಎಂದ ಎರಡನೇಯವ.

ಸೋಮಿಲಕನು ಸ್ವಲ್ಪ ಹೊತ್ತಿಗೆ ನಿದ್ದೆಯಿಂದೆದ್ದು ಕುಳಿತನು. ಆಗ ಆ ಮನೆಯ ಯಜಮಾನ ಧನಗುಪ್ತನು ಮನೆಗೆ ಹಿಂದಿರುಗಿದ. ತನ್ನ ಮನೆಯವರು ಯಾವನಿಗೋ ಊಟ ಹಾಕಿದ ಸಂಗತಿ ತಿಳಿಯುತ್ತಲೇ ಅವನಿಗೆ ಎದೆಯೇ ನಿಂತು ಹೋಗುವಷ್ಟು ಸಂಕಟ

ಆ ರಾತ್ರಿ ನಿದ್ದೆ ಮಾಡಲಾಗದೆ ಹೊರಳಾಡಿದ. ಅವನಿಗೆ ಭೇದಿ ಕೂಡಾ ಪ್ರಾರಂಭವಾಯಿತು.

ಇವನ್ನೆಲ್ಲ ಅಲ್ಲೇ ಇದ್ದು ಕಣ್ಣಾರೆ ನೋಡಿದ ಸೋಮಿಲಕನು, ಅಲ್ಲಿಂದ ಹೊರಟು ಭುಕ್ತಧನನ ಮನೆಯನ್ನು ಹುಡುಕುತ್ತಾ ಹೋದನು. ಅವನಿಗೆ ಶ್ರಮವೇನಿಲ್ಲದೆ ಆ ಮನೆ ಸಿಕ್ಕಿತು. ಭುಕ್ತಧನನ ಮನೆ ಎಲ್ಲರಿಗೂ ಗೊತ್ತಿರುವ ಮನೆ.

ಭುಕ್ತಧನನು ಸೋಮಿಲಕನನ್ನು ಬಾಗಿಲಿನಲ್ಲಿ ನೋಡಿದಕೂಡಲೇ ಅತ್ಯಾದರದಿಂದ ಸ್ವಾಗತಿಸಿ ಗೌರವದಿಂದ ಕೂಡಿಸಿ, ಕುಶಲ ವಿಚಾರಿಸಿದನು. ಬಳಿಕ ಅವನಿಗೆ ಒಳ್ಳೆಯ ಸ್ನಾನಕ್ಕೆ ಅಣಿಗೊಳಿಸಿ, ಹೊಸ ಬಟ್ಟೆಗಳನ್ನು ಉಡಲು ಕೊಟ್ಟು, ಒಳ್ಳೆಯ ಊಟ ಬಡಿಸಿ, ರಾತ್ರಿ ಮಲಗಲಿಕ್ಕೂ ಒಳ್ಳೆಯ ಹಾಸಿಗೆಯನ್ನೂ ಕೊಟ್ಟನು.

ಸೋಮಿಲಕನು ಸುಖ ನಿದ್ರೆಯಲ್ಲಿರುವಾಗ, ಅದೇ ಇಬ್ಬರು ದೇವತಾ ವ್ಯಕ್ತಿಗಳು ತಮ್ಮೊಳಗೆ ರಹಸ್ಯವಾಗಿ ಮಾತಾಡಿಕೊಳ್ಳುವುದನ್ನು ಕೇಳಿದನು.

"ಏನಿದು ಕರ್ತಾ, ಈ ಸೋಮಿಲಕನಿಗೆ ಆತಿಥ್ಯ ಕೊಡಿಸುವ ನೆವನದಲ್ಲಿ ಭುಕ್ತಧನನಿಂದ ಬಹಳ ಹಣ ಖರ್ಚು ಮಾಡಿಸಿಬಿಟ್ಟೆ. ಇನ್ನು ನಾಳೆಯ ಖರ್ಚಿಗೆ ಅವನ ಹತ್ತಿರ ಒಂದು ಕಾಸು ಕೂಡಾ ಇಲ್ಲ. ಅದರ ವರ್ತಕನದು. ನಾಳೆ ಅವನಿಗೆ ಏನು ದಾರಿ ತೋರಿಸಬೇಕೆಂದಿರುವೆ ?" ಎಂದು ಕೇಳಿದ ಮೊದಲಿನ ದೇವ.

"ಓ ಕರ್ಮನೆ, ನಾಳೆ ಬೆಳಗಾದ ಕೂಡಲೇ ರಾಜನು ಕಳುಹಿಸಿದ ಭಟನು ಬಂದು ಭುಕ್ತಧನನಿಗೆ ಅನೇಕ ಬಹುಮಾನಗಳನ್ನೂ, ತುಂಬಾ ಹಣವನ್ನೂ ಕೊಡುತ್ತಾನೆ. ಬಹಳ ದಿನಗಳವರೆಗೆ ಬೇಕಾದ ಹಾಗೆ ಖರ್ಚು ಮಾಡಬಹುದು" ಎಂದ ಎರಡನೆಯ ದೇವ.

ಬೆಳಗಾದ ಮೇಲೆ ಸೋಮಿಲಕನು ಎದ್ದು ಹೊರಗೆ ಬಂದನು. ಅಷ್ಟರಲ್ಲಿ ರಾಜನ ಕಡೆಯವನು ಬಹುಮಾನಗಳೊಂದಿಗೆ ಅಲ್ಲಿಗೆ ಬರುವುದನ್ನು ನೋಡಿದನು. "ಈ ಗುಪ್ತಧನನ ಹತ್ತಿರ ನಿಧಿಗಿಧಿ ಏನಿಲ್ಲದಿದ್ದರೂ ಧನಗುಪ್ತನಿಗಿಂತ ಇವನೇ ಎಷ್ಟೋವಾಸಿ. ಕೋಟೀಶ್ವರನಾದರೂ ಧನಗುಪ್ತನು ನೀಚ. ತಾನು ಅನುಭವಿಸಿ, ಇತರರಿಗೂ ದಾನ ಮಾಡುವುದೇ ಧನಕ್ಕೆ ತಕ್ಕ ಉಪಯೋಗ." ಎಂದುಕೊಂಡ ಸೋಮಿಲಕ.

ಅವನು ಕರ್ತನೊಂದಿಗೆ "ಭಗವನ್, ನನಗೆ ಭುಕ್ತಧನನ ಸಂಪತ್ತಿನಂತಹುದೇ ಬೇಕು. ಧನಗುಪ್ತನ ಐಶ್ವರ್ಯ ಬೇಡ." ಎಂದನು. ಕರ್ತನು ಅವನಿಗೆ ನಿರಂತರ ಐಶ್ವರ್ಯ ಲಭಿಸುವಂತೆ ವರವಿತ್ತನು. ಸೋಮಿಲಕನು ಸಂತೋಷದಿಂದ ದಾನಧರ್ಮಗಳನ್ನು ಮಾಡುತ್ತ, ಹೆಂಡತಿಯೊಂದಿಗೆ ಸುಖವಾಗಿದ್ದನು.



# ೧೮೦. ಪ್ರಾಚೀನ ಪ್ರಾಣಿಯ ಅವಶೇಷಗಳು

ಅನೇಕ ಕೋಟಿ ವರ್ಷಗಳ ಕೆಳಗೆ ಭೂಮಿಯಲ್ಲಿ ರಾಕ್ಷಸ ಪ್ರಮಾಣದ ಹಲ್ಲಿಗಳು, ಆನೆಗಳು. ಖಡ್ಗಮೃಗಗಳು ಮೊದಲಾದುವಿದ್ದುವು. ಕಾಲಕ್ರಮದಲ್ಲಿ ಆ ಪ್ರಾಣಿಯ ಜಾತಿಗಳು ಅಂತರಿಸಿ ಅವುಗಳ ಅಸ್ಥಿಕೆಗಳು ಶಿಲೀಭೂತವಾದುವು. ಮಂಗೋಲಿಯಾದ ಕೆಲವು ಪ್ರಾಂತಗಳ ನೆಲದಲ್ಲಿ ಆರಡಿ ಆಳದಲ್ಲಿ ಈ ಪ್ರಾಣಿಗಳ " ಫಾಸಿಲ್ " ಎಂಬ ಎಲುಬುಗಳು ಸಿಗುತ್ತವೆ. ಮುಖ್ಯವಾಗಿ ನದಿಗಳು ನೆಲವನ್ನು ಕೊರೆದಲ್ಲಿ, ಆ ನದಿ ಬತ್ತಿಹೋದ ಮೇಲೆ, ಭೂಮಿಯನ್ನು ಅಗೆಯದೆಯೇ ಈ ಎಲುಬುಗಳು ಸಿಗುತ್ತವೆ. ಚಿತ್ರದಲ್ಲಿರುವ ಫಾಸಿಲ್ ಎಲುಬುಗಳು ರಕ್ಕಸ ಖಡ್ಗಮೃಗದ್ದು.





# ಮಾಯಾಮಂದಿರ

ರಾಜಾ ತ್ರಿವಿಕ್ರಮನು ತನ್ನ ಸಹಜವಾದ ಹಟದಿಂದ ಮರದಕಡೆಗೆ ಹಿಂದಿರುಗಿ ಹೋಗಿ ಕೊಂಬೆಯಲ್ಲಿ ನೇತಾಡುತ್ತಿದ್ದ ಶವವನ್ನು ಕೆಳಗಿಳಿಸಿ, ತನ್ನ ಭುಜದ ಮೇಲೆ ಹಾಕಿಕೊಂಡು ಮತ್ತೆ ಸ್ಮಶಾನದ ಕಡೆಗೆ ನಡೆಯ ತೊಡಗಿದನು. ಆಗ ಶವದೊಳಗಿನ ಬೇತಾಳವು ಮಾತಾಡಲು ತೊಡಗಿ, "ಎಲೈ ಮಹಾ ರಾಜನೇ, ನಿನ್ನ ಉದ್ದೇಶವು ಸುಲಭವಾಗಿ ಸಿದ್ಧಿಗೆ ಮುಟ್ಟದೆ ಹೋಗಲು ನಿನಗೆ ಅಮಾನುಷವಾದ ಶಕ್ತಿಗಳಿಲ್ಲದೆ ಹೋದುದೇ ಕಾರಣವಾಗಿರಬೇಕೆಂದು ಆಲೋಚಿಸುವೆಯಾದರೆ ಅದು ನಿನ್ನ ಭ್ರಮೆ. ಮಾನವಾತೀತವಾದ ಶಕ್ತಿಗಳಿಂದ ಉದ್ದೇಶ ಸಿದ್ಧಿಯಾಗುವುದಿಲ್ಲವೆಂಬುದಕ್ಕೆ ನಿದರ್ಶನವಾಗಿ ನಿನಗೆ ಮೈತ್ರೇಯನೆಂಬವನ ಕಥೆ ಹೇಳುತ್ತೇನೆ. ದಾರಿಯ ಶ್ರಮ ತಿಳಿಯದಂತೆ ಕೇಳುತ್ತಾ ನಡೆ" ಎಂದು ಹೀಗೆ ಕಥೆಯನ್ನು ಪ್ರಾರಂಭಿಸಿತು :

ಉಜ್ಜಯಿನೀ ನಗರವನ್ನು ಸುಧೀರನೆಂಬ ರಾಜನು ಪಾಲಿಸಿಕೊಂಡಿದ್ದ ಕಾಲದಲ್ಲಿ, ಅವನ ಆಸ್ಥಾನದಲ್ಲಿ ವೀರದಾಸನೆಂಬ ದೊಡ್ಡ ಶಿಲ್ಪಿಯೊಬ್ಬನಿದ್ದ. ಮೈತ್ರೇಯನೆಂಬ ತಮ್ಮನೊಬ್ಬ ಅವನಿಗಿದ್ದ. ಈ ಮೈತ್ರೇಯನು

ಬೇತಾಳಕಥೆಗಳು



ಉತ್ಕಟವಾದ ಕೋರಿಕೆಗಳಿಂದ ಬಹಳ ವರ್ಷ ಹಿಮಾಲಯ ಪ್ರಾಂತದಲ್ಲಿ ತಿರುಗಾಡುತ್ತ, ಅನೇಕ ಮಂದಿ ಯೋಗಿಗಳ, ಸಿದ್ಧಪುರುಷರ ಸೇವೆಗಳನ್ನು ಮಾಡುತ್ತ ಒಂದು ಅದ್ಭುತ ಶಕ್ತಿಯನ್ನು ಸಂಪಾದಿಸಿ ಕೊಂಡು ಬಂದನು. ಆ ಶಕ್ತಿಗಿರುವ ವಿಶೇಷವೇನೆಂದರೆ, ಶಿಲ್ಪವಿಗ್ರಹಗಳಿಗೆ ಜೀವಕೊಡುವುದು.

ಮೈತ್ರೇಯನು ತನ್ನ ಅದ್ಭುತ ಶಕ್ತಿಯನ್ನು ರಾಜನ ಎದುರಿನಲ್ಲಿ ಪ್ರದರ್ಶಿಸಲು ಇಚ್ಛಿಪಟ್ಟನು. ಅವನ ಇಚ್ಛೆಯಂತೆ ಅವನ ಅಣ್ಣನು ಎರಡು ಸ್ತ್ರೀ ಮೂರ್ತಿಗಳನ್ನು ತಯಾರಿಸಿ ಕೊಟ್ಟನು. ಮೈತ್ರೇಯನು ತುಂಬಿದ ಸಭೆಯಲ್ಲಿ ಆ ಸ್ತ್ರೀ ವಿಗ್ರಹಗಳಿಗೆ ಜೀವ ಬರುವಂತೆ ಮಾಡಿದನು. ಕಲ್ಲು ಶಿಲ್ಪಗಳು ಸಾಧಾರಣ ಮನುಷ್ಯರಂತಾದುದನ್ನು ನೋಡಿ ರಾಜನೂ ಸಭೆಯಲ್ಲಿದ್ದವರೂ ದಿಗ್ಭ್ರಮೆಗೊಂಡರು. ಸುಧೀರ ಮಹಾರಾಜನು ಮೈತ್ರೇಯನ ವಿದ್ವತ್ತನ್ನು ಬಾಯ್ತುಂಬಾ ಕೊಂಡಾಡಿ, ಬಹುಮಾನವಿತ್ತು, ಮೈತ್ರೇಯನನ್ನು ತನ್ನ ಆಸ್ಥಾನದಲ್ಲೇ ಇರಬೇಕೆಂದೂ ಕೇಳಿದನು. ಮೈತ್ರೇಯನು ರಾಜನ ಕೋರಿಕೆಯನ್ನು ಅಂಗೀಕರಿಸಿಕೊಂಡನು.

ದಿನಗಳುರುಳುತ್ತಾ ಹೋದಂತೆ ಸುಧೀರ ರಾಜನಿಗೂ ಮೈತ್ರೇಯನಿಗೂ ಗಾಢವಾದ ಸ್ನೇಹ ಬೆಸೆದುಕೊಂಡಿತು. ಹಾಗಿರಲು ಒಂದುಸಾರಿ ರಾಜನಿಗೆ ತನ್ನ ಪ್ರತಿ ರೂಪಕ್ಕೆ ಜೀವಬಂದರೆ ಏನಾಗುತ್ತದೆ, ಹೇಗಿರುತ್ತದೆ ಎಂದು ನೋಡಬೇಕೆನಿಸಿತು. ಸುಧೀರನು ತನ್ನ ಕೋರಿಕೆಯನ್ನು ಮೈತ್ರೇಯನೊಂದಿಗೆ ಹೇಳಿದನು. ರಾಜನ ಕೋರಿಕೆಯನ್ನು ತೀರಿಸಲು ಮೈತ್ರೇಯನೂ ಒಪ್ಪಿಕೊಂಡನು.

ಅದರಂತೆ ಮೈತ್ರೇಯನು ತನ್ನ ಅಣ್ಣ ವೀರದಾಸನೊಂದಿಗೆ ಕಲ್ಲಿನಲ್ಲಿ ಸುಧೀರ ರಾಜನ ಪ್ರತಿಮೆಯನ್ನು ತಯಾರಿಸಲು ಹೇಳಿದನು. ಸುಧೀರನು ನಿರ್ದುಷ್ಟವಾಗಿ ರಾಜನ ಪ್ರತಿಮೆಯನ್ನು ಕೆತ್ತಿಸಿ ತದ್ರೂಪವಾಗಿ ನಿಲ್ಲಿಸಿದನು. ಮೈತ್ರೇಯನು ಅರ್ಧರಾತ್ರಿಯ ಹೊತ್ತಿನಲ್ಲಿ ತನ್ನ ಮನೆಯಲ್ಲಿಯೇ ಆ ಪ್ರತಿಮೆಗೆ ಜೀವ ಬರುವಂತೆ ಮಾಡಿ, ಆ ಮಾಯಾಸುಧೀರನನ್ನು ಕರೆದುಕೊಂಡು ರಾಜಭವನದ ಕಡೆಗೆ ಹೊರಟನು. ಸಾಧಾರಣವಾಗಿ ಎಲ್ಲಾ ದೇಶದ ರಾಜಧಾನಿಗಳಲ್ಲಿಯೂ ಶತ್ರುಗಳ ಗೂಢಚಾರರು ಇದ್ದೇ ಇರುತ್ತಾರೆ. ಅಂತಹ ಶತ್ರು ಗೂಢಚಾರನೊಬ್ಬ ಮಾಯಾಸುಧೀರನನ್ನು ನೋಡಿ ರಾಜನೇ ಅಂದುಕೊಂಡು ತನ್ನವರೊಂದಿಗೆ ಅವನ ಮೇಲೆ ಬಿದ್ದು ಕೊಂದು ಹಾಕಿ ಓಡಿ ಹೋಗಿಬಿಟ್ಟನು. ಸುಧೀರ ರಾಜನನ್ನು ಯಾರೋ ಕೊಲೆ ಮಾಡಿದರೆಂಬ ವಾರ್ತೆ, ಬೆಳಗಾಗುವಾಗ ನಗರದೊಳಗೆಲ್ಲಾ ಹಬ್ಬಿತು.

ಇದನ್ನು ನೋಡಿ ರಾಜನು, ಕೊಲೆಯಾದುದು ಮಾಯಾಸುಧೀರನೆಂದೂ ನಿಜವಾದ ಸುಧೀರ ರಾಜನು ಕ್ಷೇಮವಾಗಿರುವನೆಂದೂ ಪ್ರಜೆಗಳಿಗೆಲ್ಲ ತಿಳಿಯುವಂತೆ ಪ್ರಕಟನೆ ಹೊರಡಿಸಿದನು. ಆದರಿಂದ

ಪ್ರಜೆಗಳಿಗೆ ಸಮಾಧಾನವೂ ಆಯಿತು. ಆದರೆ ರಾಜ್ಯದೊಳಗಿದ್ದ ದುಷ್ಟರು ಕೆಲವರು, ಆ ಘಟನೆಯನ್ನು ಹಾಗೆ ಸುಮ್ಮನೆ ಹೋಗಲು ಬಿಡಲಿಲ್ಲ. "ಕೊಲೆಯಾದುದು ನಿಜಕ್ಕೂ ರಾಜನೇ. ಈಗ ರಾಜನೆಂದು ವ್ಯವಹರಿಸುವವನೇ ಮಾಯಾಸುಧೀರ. ಈ ಸುಳ್ಳು ರಾಜನನ್ನು ಅಡ್ಡವಾಗಿಟ್ಟುಕೊಂಡು ಮೈತ್ರೇಯನೇ ರಾಜ್ಯಪಾಲನೆ ಮಾಡುತ್ತಿದ್ದಾನೆ." ಎಂದು ವದಂತಿ ಎಬ್ಬಿಸಿದರು. ರಾಜನಿಗೂ ಮೈತ್ರೇಯನಿಗೂ ಇರುವ ಗಾಢವಾದ ಸ್ನೇಹವು ಆ ವದಂತಿಯನ್ನು ನಂಬುವ ಹಾಗೆ ಮಾಡಲು ಸಾಕಾಯಿತು.

ಸಾಧಾರಣ ಜನರು ಇಂತಹ ವದಂತಿಗೆ ಕಿವಿ ಜೋತು ಬಿಡುತ್ತಾರೆ. ಆದರೆ ಅಂತಃಪುರದ ರಾಣೀವಾಸದಿಂದ ಹಿಡಿದು ದಾಸದಾಸೀ ಜನರವರೆಗೆ ಎಲ್ಲರೂ ಸುಧೀರನು ಮಾಯಾಸುಧೀರನೇನೋ ಎಂಬ ಸಂಶಯದಿಂದ ಸಂಕಟ ಪಡ ತೊಡಗಿದರು. ಇನ್ನೇನು ವಿಪರೀತವಾಗುವುದೋ ಎಂದು ಎಲ್ಲರೂ ಹೇಳಲಿಕ್ಕಿಲ್ಲ ಬಿಡಲಿಕ್ಕಿಲ್ಲ ಎಂಬ ಸ್ಥಿತಿಗೆ ಬಂದು ಮಿಡುಕ ತೊಡಗಿದರು.

ಪರಿಸ್ಥಿತಿ ಯಾವ ಪರಿಣಾಮಕ್ಕೆ ಬಂತೆಂಬುದನ್ನು ಸುಧೀರನು ಸುಲಭವಾಗಿಯೇ ಗ್ರಹಿಸಿ ತಳಮಳಿಸ ತೊಡಗಿದನು. ಈ ಸಮಸ್ಯೆಗೆ ಪರಿಹಾರವೇ ಇಲ್ಲವೆನಿಸಿತು. ಕಡೆಗೆ ಅವನು ಮೈತ್ರೇಯನೊಡನೆ ಅದನ್ನೆಲ್ಲ ಹೇಳಿಕೊಂಡು, ಇದಕ್ಕೇನಾದರೂ ಪರಿಷ್ಕಾರ ಮಾರ್ಗ ನೋಡುವಂತೆ ಭಾರ ಹೇರಿದನು. ಮೈತ್ರೇಯನೂ ಪರಿಸ್ಥಿತಿಯನ್ನು ನೋಡುತ್ತ ಏನು ಮಾಡುವುದೆಂದು ಆಲೋಚಿಸಿಕೊಂಡಿದ್ದವನೇ. ಕಡೆಗೆ ಅವನಿಗೆ ಒಂದು ಉಪಾಯ ಹೊಳೆಯಿತು. ಅದಕ್ಕಿಂತ ಬೇರೆ ಉಪಾಯವೇನೂ ತೋರಲಿಲ್ಲ.

ಮೈತ್ರೇಯನು ತನ್ನ ಅಣ್ಣನ ಮೂಲಕ ತನ್ನ ಹಾಗೆಯೇ ಇರುವ ಒಂದು ವಿಗ್ರಹವನ್ನು ಮಾಡಿಸಿ, ಅದಕ್ಕೆ ಜೀವ ಬರಿಸಿ ಆ ನಕಲೀ ಮೈತ್ರೇಯನನ್ನು



ಕರೆದುಕೊಂಡು ಯಾರಿಗೂ ಗೊತ್ತಾಗದಂತೆ ರಾತ್ರಿಯಲ್ಲಿ ರಾಜನಬಳಿಗೆ ಹೋದನು.

ಸುಧೀರರಾಜನು ಇಬ್ಬರು ಮೈತ್ರೇಯರನ್ನು ನೋಡಿ ಬೆರಗಾಗಿ, "ಏನಿದು ? ನಿಮ್ಮಲ್ಲಿ ನಿಜವಾದ ಮೈತ್ರೇಯನು ಯಾರು ?" ಎಂದನು.

"ಮಹಾರಾಜರೆ, ನಿಜವಾದ ಮೈತ್ರೇಯನು ನಾನೇ. ಇವನು ನಕಲು ಮೈತ್ರೇಯ. ನೀವು ಏನು ಮಾಡಬೇಕೆಂದರೆ, ಈ ನಕಲು ಮೈತ್ರೇಯನನ್ನು ತುಂಬಿದ ರಾಜಸಭೆಯಲ್ಲಿ ಬಂಧಿಸಿ ನಿಲ್ಲಿಸಿ, ಇವನ ಮೇಲೆ ರಾಜದ್ರೋಹದ ಆರೋಪವನ್ನು ಹೇರಿ ಗಲ್ಲಿಗೆ ಹಾಕಿಸಿಬಿಡಿ. ಆಗ ಸಮಸ್ಯೆ ಸರಿಯಾಗಿ ಬಿಡುತ್ತದೆ." ಎಂದ ಮೈತ್ರೇಯ.

"ಹಾಗಾದರೆ ನಿನ್ನ ಗತಿ ಏನು ?" ಎಂದು ಸುಧೀರನು ತುಂಬ ಅಧೀರತೆಯಿಂದ ಕೇಳಿದ. ಕೂಡಲೇ ಮೈತ್ರೇಯನು ದೃಢ ನಿಶ್ಚಯದ ಸ್ವರದಿಂದ, "ನಾನು ಯಾರ ಕಣ್ಣಿಗೂ ಬೀಳುವುದಿಲ್ಲ.

ಸೀದಾ ಹಿಮಾಲಯಕ್ಕೆ ಹೋಗಿ ಕಡೆತನಕ ಅಲ್ಲಿಯೇ ಅಜ್ಞಾತವಾಗಿರುತ್ತೇನೆ. ಇದರಿಂದ ನಿಮ್ಮ ಮೇಲೆ ಬಂದಿರುವ ಅನುಮಾನ ತೀರಿಹೋಗುತ್ತದೆ. ಅದೇ ನನಗೆ ತೃಪ್ತಿ" ಎಂದ ಮೈತ್ರೇಯ.

ರಾಜನು ತನ್ನ ಒಂದು ಹುಚ್ಚು ಬಯಕೆಯಿಂದಲೇ ಹೀಗಾಯಿತೆಂದು ಪಶ್ಚಾತ್ತಾಪ ಪಟ್ಟ. ಮೈತ್ರೇಯ ನನ್ನು ಆಲಿಂಗಿಸಿ ಅಪ್ಪಣೆ ಕೊಡಲು ಅವನಿಗೆ ಬಹಳ ಕಷ್ಟವಾಯಿತು. ಅಂತೂ ಅಪ್ಪಣೆ ಪಡೆದು ಮೈತ್ರೇಯನು ಆ ರಾತ್ರಿಯೇ ಹೊರಟು ಹಿಮಾ ಲಯದ ಕಡೆಗೆ ಹೋಗಿಬಿಟ್ಟ. ಮರುದಿನ ಬೆಳಿಗ್ಗೆ ಸುಧೀರನು ತುಂಬಿದ ಸಭೆಯಲ್ಲಿ ನಕಲೀ ಮೈತ್ರೇಯನನ್ನು ಬಂಧಿಸಿ, ಅವನ ಮೇಲೆ ರಾಜ ದ್ರೋಹದ ಅಪರಾಧವನ್ನು ಹೇರಿ ಗಲ್ಲಿನ ಶಿಕ್ಷೆ ವಿಧಿಸಿದನು. ಆ ನಕಲೀ ಮೈತ್ರೇಯನನ್ನು ಗಲ್ಲಿ ಗೇರಿಸುವಾಗ, ಅದನ್ನು ನೋಡಲು ಪ್ರಜೆಗಳು ಸಾವಿರಾರು ಸಂಖ್ಯೆಯಲ್ಲಿ ಬಂದು ಗುಂಪು ಗೂಡಿದರು. ರಾಜನಾಗಿರುವವನು ಮಾಯಾಸುಧೀರನು ಅಲ್ಲ ವೆಂದು ಈಗ ಪ್ರಜೆಗಳಿಗೆ ನಂಬುಗೆಯುಂಟಾಯಿತು.

ಬೇತಾಳವು ಹೀಗೆ ಕಥೆಯನ್ನು ಮುಗಿಸಿ, "ಮೈತ್ರೇಯನು ಮಾಡಿದ ಕೆಲಸವು ಸರಿಯಾದು ದೆಂದು ಹೇಳಲು ಸಂದೇಹವೇನಿಲ್ಲದಿದ್ದರೂ ಅವನಲ್ಲಿದ್ದ ಮಾನವಾತೀತವಾದ ಶಕ್ತಿ ಅಂತಹ ದುಷ್ಫಲಿತವನ್ನು ಕೊಡಲಿಕ್ಕೂ, ಕಡೆಗೆ ಅವನು ಜೀವನ್ಮೃತನಂತೆ ಹಿಮಾ ಲಯದಲ್ಲಿ ದಿಕ್ಕಿಲ್ಲದ ಬಾಳು ಬಾಳು ವಂತಾದುದಕ್ಕೂ ಕಾರಣವೇನು ? ಈ ಸಂದೇಹಕ್ಕೆ ತಕ್ಕ ಸಮಾಧಾನ ತಿಳಿದು ಕೂಡಾ ಹೇಳದೆ ಹೋದರೆ ನಿನ್ನ ತಲೆ ಯೊಡೆದು ಹೋಗುತ್ತದೆ, ಜಾಗ್ರತೆ ! " ಎಂದಿತು.

ಅದಕ್ಕೆ ತ್ರಿವಿಕ್ರಮನು ಹೀಗೆಂದ: "ಅಲೌಕಿಕ ವೆನಿಸುವಂತಹ ಅಮಾನುಷ ಶಕ್ತಿಗಳು ಲೌಕಿಕ ಜೀವ ನಕ್ಕೆ ಹೇಗೆ ಉಪಯೋಗಿಸುವುದೆಂದು ಹೇಳಲು ಯಾರಿಗೂ ಸಾಧ್ಯವಿಲ್ಲ. ಅವುಗಳಿಂದ ಬರುವ ಫಲಿತ ಗಳ ಮೇಲೆ ಮಾನವರಿಗೆ ಯಾವ ಅಧಿಕಾರವೂ ಇರ ಲಾರದು. ವಿಗ್ರಹಗಳಿಗೆ ಜೀವ ತುಂಬುವುದಕ್ಕಷ್ಟೇ ಕಲಿತಿದ್ದ ಮೈತ್ರೇಯನು ಲೋಕದೊಂದಿಗೆ ಹೊಂದಿ ಕೊಂಡು ಬಾಳುವ ಅರ್ಹತೆ ಪಡೆದವನೆಂದು ಹೇಳಲು ಸಾಧ್ಯವಿಲ್ಲ. ಅವನಿಗೆ ಊರು ಕೇರಿ ಹೆಸರುಗಳಿಲ್ಲದ ಜೀವಿತದ ಹೊರತು ಮತ್ತೊಂದಿರಲು ಸಾಧ್ಯವಿಲ್ಲ. ಅವನ ಅಮಾನುಷ ಶಕ್ತಿಗೆ ಕೆಟ್ಟ ಫಲಿತವು ಸ್ಪಷ್ಟ ವಾದಾಗಲೇ ಅವನಿಗೆ ತನ್ನ ನಿರುಪಯೋಗತೆ ಸ್ಪಷ್ಟ ವಾಯಿತು. ಆದುದರಿಂದ ಮೈತ್ರೇಯನು ಕಡೆಗೆ ಹಿಮಾಲಯಾ ವಾಸಿಯಾದುದು ತುಂಬ ಸಹಜವೇ."

ಹೀಗೆ ರಾಜನಿಗೆ ಮೌನಭಂಗವಾದ ಕೂಡಲೇ ಬೇತಾಳವು ಶವದೊಂದಿಗೆ ಮಾಯವಾಗಿ ಹೋಗಿ ಮರದ ಕೊಂಬೆ ಹಿಡಿದು ನೇತಾಡತೊಡಗಿತು.



# ಹೆಚ್ಚು ಪ್ರಿಯವಾದುದು

ಇಂದ್ರಸೇನ ನಗರವನ್ನು ಚಂದ್ರಸೇನನು ಪಾಲಿಸುತ್ತಿದ್ದಾಗ ಅವನ ಆಸ್ಥಾನದಲ್ಲಿ ಶಿವಶರ್ಮನೆಂಬ ಕವಿ, ಆಸ್ಥಾನದ ಮಹಾಕವಿಯಾಗಿದ್ದನು.

ಆ ರಾಜ್ಯದಲ್ಲಿ ನವರಾತ್ರಿ ಉತ್ಸವವು ಬಹಳ ವೈಭವದಿಂದ ನಡೆಯುತ್ತಿದ್ದಿತು. ದೇಶದೇಶಗಳಿಂದ ಕವಿಗಳೂ ಗಾಯಕರೂ ಇತರ ಕಲಾಕಾರರೂ ಇಂದ್ರಸೇನ ನಗರಕ್ಕೆ ಬಂದು, ತಮ್ಮ ಕಲಾಪ್ರಾವೀಣ್ಯತೆಯನ್ನು ಪ್ರದರ್ಶಿಸಿ ತಕ್ಕ ಸನ್ಮಾನಗಳನ್ನು ಪಡೆಯುತ್ತಿದ್ದರು.

ಒಂದು ವರ್ಷ ಎಂದಿನಂತೆ ಎಲ್ಲಾ ಕಲಾಕಾರರಿಗೂ ಸನ್ಮಾನ ದೊರೆತುವು. ಶಿವಶರ್ಮನಿಗೆ ಕೂಡಾ ಪ್ರತ್ಯೇಕವಾಗಿ ದೊಡ್ಡ ಸನ್ಮಾನ ದೊರೆಯಿತು.

ಇದೆಲ್ಲಾ ಆದ ಮೇಲೆ ಬ್ರಾಹ್ಮಣರಿಗೆ ಸಂತರ್ಪಣೆ ನಡೆಯಿತು. ಆಮೇಲೆ ಎಲ್ಲರಿಗೂ ವೀಳ್ಯದೊಂದಿಗೆ ದಕ್ಷಿಣೆ ಕೊಟ್ಟು ಕಳುಹಿಸುವ ಅಗಸೆಬಾಗಿಲ ಸಂಭಾವನೆ ನಡೆಯುತ್ತಿತ್ತು.

ಶಿವಶರ್ಮ ಕವಿಯೂ ಅಲ್ಲಿಗೆ ಹೋದ. ಸಂಭಾವನೆಯ ಸ್ಥಳದಲ್ಲಿ ನೂಕುನುಗ್ಗಲು ಜಾಸ್ತಿಯಾಗಿತ್ತು. ರಾಜಭಟರು ಬ್ರಾಹ್ಮಣರನ್ನು ಕ್ರಮವಾಗಿ ಸರಿಸಲು ಶ್ರಮಿಸುತ್ತಿದ್ದರು. ಈ ನುಗ್ಗಾಟದಲ್ಲಿ ಶಿವಶರ್ಮ ಕಾಲು ಜಾರಿ ಕೆಸರಿನಲ್ಲಿ ಬಿದ್ದುಬಿಟ್ಟನು.

ಮಾಳಿಗೆಯ ಮೇಲೆ ಅದನ್ನು ನೋಡುತ್ತಿದ್ದ ರಾಜ ಶಿವವರ್ಮನನ್ನು ತನ್ನ ಬಳಿಗೆ ಕರೆಯಿಸಿ "ಬೀಳಲಿಕ್ಕೇನಾಯಿತು ?" ಎಂದು ಕೇಳಿದ.

ಅದಕ್ಕೆ ಶಿವಶರ್ಮ ಈ ಶ್ಲೋಕ ಹೇಳಿದ:

ಕ್ಷುತ್ತೃಡಾಶಾಃ ಕುಟುಂಬಿನ್ಯೋ ಮಯಿ ಜೀವತಿ ನಾನ್ಯಗಾಃ
ತಾಸಾಮಂತ್ಯಾ ಪ್ರಿಯತಮಾ ತಸ್ಯಾ ಶೃಂಗಾರ ಚೇಷ್ಟಿತಮ್ ॥

(ನನಗೆ ಹಸಿವೆ, ದಾಹ, ಆಶೆ ಎಂಬ ಮೂವರು ಹೆಂಡತಿಯರಿದ್ದಾರೆ. ಅವರಲ್ಲಿ ಮೂರನೆಯವಳ ಮೇಲೆ ನನಗೆ ಹೆಚ್ಚು ಪ್ರೀತಿ. ಅವಳು ಮಾಡಿದ ಶೃಂಗಾರ ಚೇಷ್ಟೆಯಿದು.)





# ಮೊಟ್ಟೆಗಳ ವ್ಯಾಪಾರ

ಗೀತಾಪುರವೆಂಬ ಊರು ಕೋಳಿ ಮೊಟ್ಟೆಗಳಿಗೆ ಪ್ರಸಿದ್ಧಿ ಪಡೆದಿತ್ತು. ಅದು ಸಾಧಾರಣವಾದೊಂದು ಗ್ರಾಮ. ಅಲ್ಲಿಯ ರೈತರು ವ್ಯವಸಾಯದೊಂದಿಗೆ ಕೋಳಿ ಸಾಕಣೆಯನ್ನು ಉಪವೃತ್ತಿಯನ್ನಾಗಿ ಇಟ್ಟುಕೊಂಡಿದ್ದರು. ಅದರಿಂದ ಅವರಿಗೆ ಒಳ್ಳೆಯ ಆದಾಯವೂ ಇದ್ದಿತು. ಸಾಧಾರಣವಾಗಿ ಗೀತಾಪುರದ ಮೊಟ್ಟೆಗಳು ದೊಡ್ಡವಾಗಿಯೂ ರುಚಿಯಾಗಿಯೂ ಇದ್ದು ಒಳ್ಳೆಯ ಬೆಲೆ ಬರುತ್ತಿದ್ದುದರಿಂದ, ಅದೊಂದು ಉತ್ಸಾಹದ ಕಾಯಕವೇ ಎನಿಸಿತ್ತು.

ಇದ್ದಕ್ಕಿದ್ದ ಹಾಗೆ ಏನಾಯಿತೋ ಏನೋ? ಆ ಊರಿನಲ್ಲಿ ಕೋಳಿಗಳು ಅಧಿಕ ಸಂಖ್ಯೆಯಲ್ಲಿ ಸಾಯಲು ತೊಡಗಿದುವು. ಅಲ್ಲಿ ಅಷ್ಟು ಕೋಳಿ ಸತ್ತುವು, ಇಲ್ಲಿ ಇಷ್ಟು ಹೋದುವು ಎಂಬ ಸುದ್ದಿ ಮೇಲಿಂದ ಮೇಲೆ ಬರತೊಡಗಿತು. ಬೇಗದಲ್ಲೇ ಆ ಗ್ರಾಮದಲ್ಲಿ ಒಂದು ಕೋಳಿ ಕೂಡಾ ಇಲ್ಲದೆ ಹೋಯಿತು. ದೀನಾನಾಥನೆಂಬ ದೊಡ್ಡ ರೈತನ ಐನೂರು ಕೋಳಿಗಳಲ್ಲಿ ಒಂದು ಕೂಡಾ ಉಳಿಯಲಿಲ್ಲ.

"ಇದು ಯಾವುದೋ ಗಾಳಿಯ ಚೇಷ್ಟೆ. ನಮ್ಮ ಕೋಳಿಗಳು ಯಾವ ಪಿಶಾಚದ ಬಾಯಿಗೋ ಬೀಳುತ್ತವೆ. ಆ ಪಿಶಾಚಗಳ ನಿವಾರಣೆಗೆ ತಕ್ಕ ಮಾರಣ ಹೋಮ ಮಾಡಿದ ಹೊರತು ಕೋಳಿಗಳಿಗೆ ಉಳಿಗಾಲವಿಲ್ಲ. ಇಲ್ಲದಿದ್ದರೆ ಕೋಳಿಗಳಿಗೆ ಬರುವ ಗತಿ ಮನುಷ್ಯರಿಗೂ ಬಂದೀತು!" ಎಂದು ದೀನಾನಾಥನು ಅಕ್ಕಪಕ್ಕದವರೊಂಧಿಗೆ ಹೇಳಿದನು.

ಅವನ ಮಾತು ಇತರ ರೈತರಿಗೆ ನಿಜವೆಂದೇ ತೋರಿತು. ನೆರೆಯ ಗ್ರಾಮದಲ್ಲಿ ಒಬ್ಬ ದೊಡ್ಡ ಭೂತವೈದ್ಯನಿದ್ದ. ಅವನನ್ನು ಕರೆಸುವುದೆಂದು ಗ್ರಾಮದವರು ನಿಶ್ಚಯಿಸಿ, ಚಂದಾ ವಸೂಲು ಮಾಡಿಕೊಂಡರು. ಆಮೇಲೆ ಆ ಭೂತಮಾಂತ್ರಿಕನನ್ನು ಕರೆಯಿಸಿ, ಕೋಳಿಗಳಿಗೆ ಹಿಡಿದ ಪಿಶಾಚಗಳ ಪೀಡೆ ಪರಿಹಾರವಾಗಲು ಏನು ಮಾಡಬೇಕೋ ಅದೆಲ್ಲ ಮಾಡುವಂತೆ ಅವನಿಗೆ ಹೇಳಿದರು.

ಒಂದು ಶನಿವಾರ ಸಾಯಂಕಾಲ ಭೂತವೈದ್ಯನು ತನ್ನ ಶಿಷ್ಯರೊಂದಿಗೆ ಬಂದು, ನಿರ್ದಿಷ್ಟವಾದೊಂದು ಜಾಗದಲ್ಲಿ ಭಾರೀ ದೊಡ್ಡ ಭೂತಪೂಜೆ, ಬಲಿಹರಣ, ಉಚ್ಚಾಟನೆ ಮುಂತಾದುವನ್ನು ಮಾಡಿದ. ಆಮೇಲೆ ಗ್ರಾಮಸ್ಥರು ಹಾಕಿದ ಮೃಷ್ಟಾನ್ನ ಭೋಜನವನ್ನು ಹೊಟ್ಟೆ ತುಂಬ ಮೆದ್ದು, ದಕ್ಷಿಣೆಗಳ ಮೂಟೆಯನ್ನು

ಪಿ. ಸಿ. ಸರ್ಕಾರ್, ಐಂದ್ರಜಾಲಿಕರು

ಎತ್ತಿಕೊಂಡು ಹೊರಟುಹೋದ. ಇನ್ನೇನೂ ಭಯವಿಲ್ಲವೆಂದು ಗ್ರಾಮದೊಳಗಿನ ರೈತರೆಲ್ಲಾ ನಂಬಿ, ಮತ್ತೆ ಕೋಳಿಗಳನ್ನು ತಂದು ಸಾಕತೊಡಗಿದರು. ಮತ್ತೆ ಕೋಳಿ ಮೊಟ್ಟೆ ವ್ಯಾಪಾರ ಪ್ರಾರಂಭವಾಯಿತು.

ಆದರೆ ಮತ್ತೆ ಮೊದಲಿನ ಪೀಡೆಯೇ ಬರತೊಡಗಿತು. ಅದೇ ವಿಚಿತ್ರ ರೋಗದಿಂದ ಕೋಳಿಗಳೆಲ್ಲಾ ಒಂದರಮೇಲೊಂದಾಗಿ ಸಾಯತೊಡಗಿದುವು.

"ಯಾರಿಗೆ ಬೇಕು ಈ ಕೋಳೀ ಮೊಟ್ಟೆ ವ್ಯಾಪಾರ? ನಮ್ಮ ಮಾಮೂಲು ವ್ಯವಸಾಯವೊಂದೇ ಸಾಕು. ಈ ಕೋಳೀ ವ್ಯಾಪಾರಕ್ಕೆ ನಮಗೇನೋ ಶಾಪ ಬಿದ್ದಿರಬೇಕು. ಇನ್ನು ಅದು ಕೂಡಿಬಾರದು!" ಎಂದ ದೀನಾನಾಥ ಉಳಿದ ರೈತರೊಂದಿಗೆ.

ಹೀಗೆ ಎರಡನೇ ಸಾರಿ ಕೂಡಾ ಗೀತಾಪುರದಲ್ಲಿ ಮಾದರಿಗೆ ಸಹಾ ಕೋಳೀ ಮೊಟ್ಟೆ ಕಣ್ಣಿಗೆ ಬೀಳದಂತಾಯಿತು. ರೈತರು ತಮ್ಮ ವಿರಾಮ ಕಾಲವನ್ನು ನೊಣ ಜಾಡಿಸುತ್ತಾ, ಉಗುರು ಚಿವುಟುತ್ತಾ ಕಳೆಯುತ್ತಿದ್ದರು. ಎಲ್ಲರಿಗೂ ಬೇಸರವೇ.

ಆ ಗೀತಾಪುರದ ಒಬ್ಬ ಆಸ್ತಿವಂತನ ಮಗನಾಗಿದ್ದ ಶಂಕರನೆಂಬವನು ಹೆಚ್ಚಿನ ಓದಿಗಾಗಿ ಪಟ್ಟಣಕ್ಕೆ ಹೋಗಿದ್ದ. ರಜೆಯಲ್ಲಿ ಮನೆಗೆ ಬಂದಿದ್ದ ಅವನಿಗೆ ತನ್ನ ಊರು ಬಹಳ ಸಪ್ಪಗಾದುದು ಕಾಣಿಸಿತು. ಹೋದ ಸಾರಿ ಅವನು ಮನೆಗೆ ಬಂದಾಗ ಹೊತ್ತು ಹೊತ್ತಿಗೂ ಭೋಜನದಲ್ಲಿ ಮೊಟ್ಟೆ ಇದ್ದಿತು. ಈ ಸಾರಿ ಮೂರು ದಿನಗಳಿಂದ ಊಟದಲ್ಲಿ ಕೋಳೀ ಮೊಟ್ಟೆ ಯಾವ ರೂಪದಲ್ಲಿಯೂ ಕಾಣಲಿಲ್ಲ. ಅಂಗಡಿಗಳಲ್ಲಿಯೂ ಇಲ್ಲ.

ಅವನು ಆಶ್ಚರ್ಯದಿಂದ ತಾಯಿಯೊಂದಿಗೆ ಕೇಳಿದ. ಊರಿಗೇನೋ ಶಾಪ ಬಿದ್ದು, ಪಿಶಾಚಿಗಳಿಂದ ಕೋಳಿಗಳೆಲ್ಲ ಸತ್ತು ಹೋದುದರಿಂದ ಮೊಟ್ಟೆಯ ಹೆಸರೇ ಇಲ್ಲದಾಯಿತೆಂದು ತಾಯಿ ಹೇಳಿದಳು.

ಮೊಟ್ಟೆಗಳಿಗೆ ಬಂದ ಆಪದವನ್ನು ಕೇಳಿದ ಮೇಲೆ ಶಂಕರನಿಗೆ ಯೋಚನೆ ಹಿಡಿಯಿತು. ಕೋಳಿ ಮೊಟ್ಟೆಯ ವ್ಯಾಪಾರದಿಂದ ಊರೊಳಗಿನ ರೈತರಿಗೆ ಎಷ್ಟು ಲಾಭವಾಗುತ್ತಿತ್ತೆಂಬ ಸಂಗತಿ ಅವನಿಗೆ





ಗೊತ್ತಿತ್ತು. ಆದರ ಹಾನಿಗೆ ಊರವರು ಹೇಳುವ ಕಾರಣದಲ್ಲಿ ಅವನಿಗೇನೂ ನಂಬುಗೆಯಿರಲಿಲ್ಲ. ತಾನು ಹೇಗಾದರೂ ಮಾಡಿ ಗ್ರಾಮದಲ್ಲಿ ಮತ್ತೆ ಕೋಳಿ ಸಾಕಣೆಯನ್ನೂ ಮೊಟ್ಟೆಗಳ ವ್ಯಾಪಾರವನ್ನೂ ಊರ್ಜಿತಗೊಳಿಸಬೇಕೆಂದು ನಿಶ್ಚಯಿಸಿದನು. ಆಸಲೇ ದೇಶದಲ್ಲಿ ಆಹಾರ ಕೊರತೆ ಹೆಚ್ಚಾಗಿದೆ. ಕೋಳಿ ಮೊಟ್ಟೆಯಂತಹ ಮಾಂಸ ವಸ್ತುಗಳ ಮಾತೂ ಅಷ್ಟೇ. ಆದುದರಿಂದ ಆಹಾರದ ಉತ್ಪತ್ತಿ ಕುಂದಿಹೋಗುವ ಹಾಗೆ ಅಗಬಾರದು.

ಮರುದಿನ ಬೆಳಿಗ್ಗೆ ಶಂಕರ್ ದೀನಾನಾಥನ ಮನೆಗೆ ಹೋಗಿ, ತನ್ನ ನಂಬುಗೆಯನ್ನು ಹೊರಗೆಡಹುತ್ತ, ಕೋಳಿಗಳು ಸಾಯಲು ಯಾವುದೋ ಅಂಟು ರೋಗವೇ ಕಾರಣವಲ್ಲದೆ, ಶಾಪವೋ, ಪಿಶಾಚ ಬಾಧೆಯೋ ಕಾರಣವಲ್ಲವೆಂಬುದನ್ನು ಅವನಿಂದ ಒಪ್ಪಿಸಲು ಬಹಳ ಪ್ರಯತ್ನಪಟ್ಟನು. ಆದರೆ ರೈತರ ಮೂಢ ವಿಶ್ವಾಸಗಳು ಬರಿ ಮಾತಿಗೆಲ್ಲ ಬಿಟ್ಟು ಹೋಗುವಂತಹವಲ್ಲ. ಶಂಕರ್ ಆಲೋಚನೆ ಮಾಡಿದ. ಅವನು ಪಟ್ಟಣದಲ್ಲಿ ಕಲಿಯುವಾಗ ಕೆಲವು ಇಂದ್ರ ಜಾಲ ವಿದ್ಯೆಗಳನ್ನೂ ಅಭ್ಯಸಿಸಿದ್ದನು. ಜನರ ಮೂಢ ವಿಶ್ವಾಸಗಳನ್ನು ಹೋಗಲಾಡಿಸಲು ಒಂದು ಇಂದ್ರ ಜಾಲ ಮಾಡಬೇಕೆಂದು ನಿಶ್ಚಯಿಸಿಕೊಂಡನು.

ಅವನು ಗ್ರಾಮಸ್ಥರೊಂದಿಗೆ, "ನಾನು ಬಹಳ ಕಾಲ ಪಟ್ಟಣದಲ್ಲಿರುತ್ತೇನಷ್ಟೆ? ಅಲ್ಲಿಯ ದೇವಾಲಯ ಗಳಲ್ಲಿ ದೊಡ್ಡ ದೊಡ್ಡ ಬೈರಾಗಿಗಳೂ ಸಿದ್ಧರೂ ಇರುತ್ತಾರೆ. ನಮ್ಮ ತಂದೆ ಆಗಾಗ ಕಾಗದ ಬರೆಯು ವಾಗ ಊರಲ್ಲಿರುವ ಕಷ್ಟನಷ್ಟಗಳನ್ನೂ ಬರೆಯು ತ್ತಾರೆ. ಆಗ ನಾನು ಒಬ್ಬ ಸಿದ್ಧನ ಬಳಿಗೆ ಹೋಗಿ ಅವನ ದರ್ಶನ ಮಾಡಿ, ಈ ಊರ ಪರಿಸ್ಥಿತಿಯನ್ನೆಲ್ಲಾ ಅವನಿಗೆ ಹೇಳಿದೆ. ಆ ಸಿದ್ಧನ ಹೆಸರು ಗಂಭೀರಾನಂದ ಮಹಾರಾಜ. ಆತ ನನಗೆ ಒಂದು ತಾಯತ್ತು ಪ್ರಸಾದಿಸಿ ಅದು ಕೋಳಿ ಮೊಟ್ಟೆಗಳ ಮೇಲೆ ಅದ್ಭುತ ಪ್ರಭಾವ ಬೀರುವುದೆಂದು ಹೇಳಿದ್ದಾನೆ. ಅದರ ಪ್ರಭಾವವೇನೆಂಬುದನ್ನು ನಿಮಗೂ ತೋರಿಸುತ್ತೇನೆ. ನಿಮಗೆ ನಂಬುಗೆ ಹುಟ್ಟಲಿಕ್ಕಾಗಿ ನಾನೇ ಕೋಳಿ ಸಾಕಣೆ ಪ್ರಾರಂಭಿಸಿ ಶಾಪದ ಕೇಡುಗಳಿಂದ ಹೇಗೆ ತಪ್ಪಿಸಿಕೊಳ್ಳಲಾಗುವುದೆಂಬುದನ್ನು ತೋರಿಸುತ್ತೇನೆ. ತಾಯತ್ತಿನ ಪ್ರಭಾವವನ್ನು ಯಾವಾಗ ತೋರಿಸಲಿ? ನಿಮ್ಮೆಲ್ಲರ ಸಮಯ ಹೇಳಿ" ಎಂದನು.

ದೀನಾನಾಥನು ಕೆಲವರೊಡನೆ ಮಾತಾಡಿ, ಎಲ್ಲರ ಇಷ್ಟ ತಿಳಿದು, "ನಾಳೆ ಮಧ್ಯಾಹ್ನ ದಾಟಿದ ಮೇಲೆ ನಮ್ಮ ಮನೆಯಲ್ಲೇ ಆ ಪ್ರಭಾವ ತೋರಿಸು. ನೋಡಲು ಎಲ್ಲ ರೈತರೂ ಬರುತ್ತಾರೆ" ಎಂದನು.

ಮರುದಿನ ಅಪರಾಹ್ಣದ ಹೊತ್ತಿಗೆ ಶಂಕರ್ ದೀನಾ ನಾಥನ ಮನೆಗೆ ಹೋದನು.. ಅಲ್ಲಿ ಅನೇಕ ಮಂದಿ ಗ್ರಾಮಸ್ಥರು ಸೇರಿಕೊಂಡಿದ್ದರು. ಶಂಕರ್ ತನ್ನ ಜೇಬಿನೊಳಗಿನಿಂದ ಒಂದು ತಾಮ್ರದ ತಾಯತ್ತನ್ನು ತೆಗೆದು ಎತ್ತರವಾದ ಪೀಠದ ಮೇಲೆ ಇಟ್ಟನು

ಆಮೇಲೆ ಇನ್ನೊಂದು ಜೇಬಿನೊಳಗಿನಿಂದ ಕರವಸ್ತ್ರವನ್ನು ತೆಗೆದು ಎಡದ ಅಂಗೈಯ ಮೇಲೆ ಹರಡಿ, ಬಲಗೈಯಿಂದ ಜೇಬಿನೊಳಗಿನಿಂದ ಒಂದು ಕೋಳಿ ಮೊಟ್ಟೆಯನ್ನು ತೆಗೆದು ಎಡದ ಅಂಗೈಯ ಕರವಸ್ತ್ರದ ಮೇಲಿಟ್ಟು, ಅದನ್ನು ಅದೇ ಕರವಸ್ತ್ರದಿಂದ ಮುಚ್ಚಿದನು. ತರುವಾಯ ಅವನು ಬಲಗೈಯಿಂದ ತಾಯಿತ್ತನ್ನು ತೆಗೆದು ಅದನ್ನು ಕರವಸ್ತ್ರದೊಳಗೆ ಹೊಗಿಸಿ, ಅದರಿಂದ ಏನೋ ಮಾಡಿ, ಮತ್ತೆ ತಾಯಿತ್ತನ್ನು ಹೊರಕ್ಕೆ ತೆಗೆದನು. ಕೆಲವು ಕ್ಷಣ ತಡೆದು ಕರವಸ್ತ್ರದ ಕೊನೆಗಳನ್ನು ಎತ್ತಿ ಬಿಡಿಸಿದನು. ಈಗ ಅವನ ಎಡಗೈಯಲ್ಲಿ ಎರಡು ಕೋಳಿ ಮೊಟ್ಟೆಗಳಿರುವುದನ್ನು ನೋಡಿ ಗ್ರಾಮಸ್ಥರ ಕಣ್ಣುಗಳು ಇಷ್ಟಗಲವಾದುವು. ಎಲ್ಲರೂ ಬಾಯಿ ತೆರೆದು ಆಶ್ಚರ್ಯದಿಂದ ಮೂಕರಾದರು.

ಶಂಕರ್ ಎರಡು ಮೊಟ್ಟೆಗಳನ್ನು ತೆಗೆದು ಕರವಸ್ತ್ರದಲ್ಲಿ ಸುತ್ತಿ ಜೇಬಿನೊಳಗಿಟ್ಟುಕೊಂಡು, ತಾಯಿತ್ತನ್ನು ಕಣ್ಣುಗಳಿಗೆ ಒತ್ತಿಕೊಂಡು, ಅದನ್ನು ಕೆಂಪು ದಾರದಿಂದ ತೋಳಿನಲ್ಲಿ ಕಟ್ಟಿಕೊಂಡು ಅಲ್ಲಿಂದೆದ್ದನು. ಮಾರನೇ ದಿನ ಅವನು ಪಟ್ಟಣಕ್ಕೆ ಹೋಗಿ ಸರಕಾರದ ಪಶುಪೋಷಣ ಶಾಲೆಯ ಅಧಿಕಾರಿಗಳೊಂದಿಗೆ ಮಾತಾಡಿ, ಕೋಳಿ ನಿಪುಣರ ಸಲಹೆಯನ್ನೂ, ಸಹಕಾರವನ್ನೂ ಪಡೆದು, ಕೋಳಿ ಸಾಕಣೆಯ ವಿಷಯದ ಪುಸ್ತಕಗಳನ್ನೂ, ಔಷಧ ಮುಂತಾದುವನ್ನೂ ಕೊಂಡುಕೊಂಡನು. ಕೋಳಿಗಳಿಗೆ ಚುಚ್ಚುಮದ್ದು ಹೇಗೆ ಕೊಡಬೇಕೆಂಬುದನ್ನೂ ಕಲಿತುಕೊಂಡನು. ಹೀಗೆ ಎರಡು ದಿನಗಳಲ್ಲಿ ಅವನು ಎಷ್ಟೋ ವಿಷಯಗಳನ್ನು ತಿಳಿದುಕೊಂಡು, ಗೀತಾಪುರಕ್ಕೆ ಹಿಂದಿರುಗಿದನು.

ಅವನು ದೀನಾನಾಥನ ಮನೆಯಲ್ಲಿ ಪ್ರದರ್ಶನ ಮಾಡಿದ ಚಿಕ್ಕತ್ತು, ಹೇಗೆಂದರೆ, ಒಂದು ದೊಡ್ಡ ಮೊಟ್ಟೆಯ ಚಿಪ್ಪನ್ನು ಸಂಪಾದಿಸಿ ಅದನ್ನು ನೆಟ್ಟಗೆ ಎರಡು ಸಮಭಾಗಗಳನ್ನಾಗಿ ಕೊಯ್ಯಬೇಕು. ಅರ್ಧ ಚಿಪ್ಪಿನಲ್ಲಿ ಚಿಕ್ಕ ಕೋಳೀ ಮೊಟ್ಟೆ ಸುಲಭವಾಗಿ ತುಂಬಿಕೊಳ್ಳುತ್ತದೆ. ಹೀಗೆ ತುಂಬಿಸಿದ ಮೊಟ್ಟೆ



ಯನ್ನು ಶಂಕರ್ ಪ್ರದರ್ಶನಕ್ಕೆ ಉಪಯೋಗಿಸಿದನು. ಅವನು ಪ್ರೇಕ್ಷಕರಿಗೆ ಚಿಪ್ಪಿನ ಮೇಲು ಭಾಗವನ್ನು ಮಾತ್ರ ತೋರಿಸಿ ಕರವಸ್ತ್ರದ ಎಡೆಯಲ್ಲಿ ಮೊಟ್ಟೆಯನ್ನು ಚಿಪ್ಪಿನೊಳಗಿನಿಂದ ಬೇರ್ಪಡಿಸಿದನು. ಸ್ವಲ್ಪ ದೂರದಿಂದ ನೋಡುವವರಿಗೆ ಚಿಪ್ಪು ಕೂಡಾ ಒಂದು ಮೊಟ್ಟೆಯ ಹಾಗೇ ಕಾಣುತ್ತದೆ.

ತನ್ನ ಇಂದ್ರಜಾಲವು ಪರಿಣಾಮ ಮಾಡಿದ ಮೇಲೆ ಶಂಕರ್ ಉತ್ಸಾಹದಿಂದ ಕಾರ್ಯ ಮಾಡತೊಡಗಿದನು. ಸರಕಾರದವರು ಸರಬರಾಯಿ ಮಾಡುವ ಮೇಲ್ತರಗತಿಯ ಆಹಾರಗಳನ್ನು ಅವುಗಳಿಗೆ ಇಟ್ಟನು. ಅಂಟು ವ್ಯಾಧಿಗಳು ತಗಲದಂತೆ ಚುಚ್ಚುಮದ್ದು ಕೊಟ್ಟು, ಬೇಕಾದ್ದೆಲ್ಲಾ ಮಾಡಿದನು. ಕ್ರಮವಾಗಿ ಕೋಳಿಗಳು ಚೆನ್ನಾಗಿ ಬೆಳೆದು ದೊಡ್ಡ ದೊಡ್ಡ ಮೊಟ್ಟೆಗಳನ್ನಿಟ್ಟುವು. ಒಂದು ಕೋಳಿ ಕೂಡಾ ಸಾಯಲಿಲ್ಲ. ಗ್ರಾಮಸ್ಥರು ದಿನಾ ಬಂದು ಅವನ ಕೋಳಿ ಸಾಕಣೆಯ ಚಂದವನ್ನು ನೋಡಿ ಹೋಗುತ್ತಿದ್ದರು. ಮೂರು ನಾಲ್ಕು ವಾರಗಳಲ್ಲಿ ಶಂಕರನ ಕೋಳೀ ಮೊಟ್ಟೆ ವ್ಯಾಪಾರ ಬಹಳ ಸೊಗಸಾಗಿ ನಡೆಯತೊಡಗಿತು.

"ದೀನೂ ಮಾವಯ್ಯಾ, ಎಲ್ಲಾ ನನ್ನ ತಾಯಿತ್ತಿನ ಮಹಿಮೆ. ಆ ಸಿದ್ಧನ ತಾಯಿತ್ತು ಬಹಳ ಚೆನ್ನಾಗಿ ಕಾಪಾಡಿತು. ಇದು ನನಗೆ ಮಾತ್ರವಲ್ಲ, ಊರಿಗೇ ಒಳಿತು ಮಾಡುವಂಥಾದ್ದು. ಪ್ರತ್ಯೇಕವಾದ ಆಹಾರ ಕೋಳಿಗಳಿಗೆ ಬಲವನ್ನು ಕೊಡುತ್ತವೆ ನೋಡಿ. ಚುಚ್ಚು ಮದ್ದುಗಳೂ ಅವುಗಳಿಗೆ ಸತ್ವಕೊಡುತ್ತವೆ. ನೀವಾರೂ ಇನ್ನು ಹೆದರಬೇಕಾಗಿಲ್ಲ. ಮತ್ತೆ ಕೋಳಿಗಳ ವ್ಯವಸಾಯ ಪ್ರಾರಂಭಿಸಿರಿ. ಗೀತಾಪುರ ಕೋಳೀ ಮೊಟ್ಟೆಗಳು ಮತ್ತೆ ಮಾರಾಟಕ್ಕೆ ಬರಲಿ. ಸಿದ್ಧನನ್ನು ಕೇಳಿ ಇನ್ನೂ ತಾಯಿತ್ತು ತರುತ್ತೇನೆ. ನಾನಿಲ್ಲಿ ಇರುವವರೆಗೂ ನನ್ನ ತಾಯಿತ್ತಿನ ರಕ್ಷೆ ಇದ್ದೇ ಇರುತ್ತೆ. ಪ್ರತಿದಿನಾ ಪ್ರತಿ ಮನೆಗೂ ಬಂದು ನಿಮ್ಮ ಕೋಳಿಗಳಿಗೆ ಯಾವುದೇ ಅಪಾಯವಿಲ್ಲದಂತೆ ನೋಡುತ್ತೇನೆ." ಎಂದ ಶಂಕರ್.

ಶಂಕರನ ಪ್ರೋತ್ಸಾಹದಿಂದ ರೈತರು ಹೊಸತಾಗಿ ಕೋಳಿಗಳನ್ನು ಕೊಂಡುಕೊಂಡರು. ಶಂಕರ್ ಅವುಗಳಿಗೆ ಬೇಕಾದ ಔಷಧಗಳನ್ನೂ, ಆಹಾರಗಳನ್ನೂ ಏರ್ಪಡಿಸಿಕೊಟ್ಟನು. ಕೋಳಿಗಳೆಲ್ಲ ಬಹಳ ಚೆನ್ನಾಗಿ ಬೆಳೆದು ದೊಡ್ಡ ದೊಡ್ಡ ಮೊಟ್ಟೆಗಳನ್ನು ಇಡತೊಡಗಿದುವು. ಮತ್ತೆ ಗೀತಾಪುರದ ಕೋಳಿ ಮೊಟ್ಟೆಗಳು ತುಂಬಾ ಪೇಟೆಗೆ ಬರ ತೊಡಗಿದುವು.

ತರುವಾಯ ಶಂಕರ್ ಪಶುಪೋಷಣೆಯಲ್ಲಿ ಪ್ರತ್ಯೇಕ ಶಿಕ್ಷಣ ಪಡೆದು, ತನ್ನ ಊರಿಗೆ ಹಿಂದಿರುಗಿ ಬಂದನು. ಚಿಕ್ಕವನಾದರೂ ಎಲ್ಲರಿಗೂ ಅವನೊಬ್ಬ ಗುರುವಿನಂತಾದನು.





# ಧರ್ಮವೀರನ ದಪ್ತರ

ಹಿಂದೆ ಜಯಂತವೆಂಬ ರಾಜ್ಯವೊಂದಿತ್ತು, ಚಂದ್ರ ವರ್ಮನೆಂಬ ರಾಜನು ಅದನ್ನು ಪಾಲಿಸಿಕೊಂಡಿದ್ದನು. ಆವನ ಸಭಾ ಮಂಟಪದ ಕಾವಲುಗಾರನಾಗಿ ಧರ್ಮ ವೀರನೆಂಬವನು ನಿಯಮಿತನಾಗಿದ್ದನು. ಒಂದು ದಿನ ರಾಜನಿಗೆ ಅವನ ಮೇಲೆ ಏನೋ ಕರುಣೆ ಬಂದಿತು. "ಏನಪ್ಪ, ನಿನ್ನ ಜತೆಗೆ ಸಹಾಯಕನಾಗಿ ಇನ್ನೊಬ್ಬ ಭಟನನ್ನು ನಿಯಮಿಸುತ್ತೇನೆ" ಎಂದ ರಾಜ.

"ನನಗೇನೂ ಕಷ್ಟವಿಲ್ಲ, ಅದೇನೂ ಬೇಡ ಮಹಾ ಪ್ರಭುಗಳೇ" ಎಂದು ಧರ್ಮವೀರ ಪೂರ್ತಿ ಮಾತು ಹೇಳುವುದರೊಳಗೇ, ರಾಜನು ಮತ್ತಾರೊಂದಿಗೋ ಮಾತಾಡುವ ನೆಪದಿಂದ ಅತ್ತ ಹೋಗಿಬಿಟ್ಟನು.

ಧರ್ಮವೀರನು ತನಗೆ ಜತೆಗಾರ ಬೇಡವೆಂದು ಹೇಳಲು ಕಾರಣವಿತ್ತು. ರಾಜನ ದರ್ಶನಕ್ಕಾಗಿ ಬರುವವರ ಕೈಯಿಂದ ಧರ್ಮವೀರನು ಸರಾಗವಾಗಿ ಲಂಚ ಪಡೆಯುತ್ತಿದ್ದನು. ಹಣಕೊಡಲು ಸಾಧ್ಯವಿಲ್ಲ ದವರಿಂದ ಹಣ್ಣು ಕಾಯಿ ಪಲ್ಯಗಳನ್ನಾದರೂ ವಸೂಲು ಮಾಡುತ್ತಿದ್ದನು. ತನ್ನ ಜತೆಯಲ್ಲಿ ಇನ್ನೊಬ್ಬನಿದ್ದರೆ ಅವನೂ ಪಾಲು ಕೇಳಬಹುದು; ಅಥವಾ ಚಾಡಿ ಹೇಳಲೂ ಬಹುದು.

ರಾಜನು ಹೇಳಿದಂತೆ ಮಾಡಿಯೇಬಿಟ್ಟನು. ಮರು ದಿನ ಧರ್ಮವೀರನಿಗೆ ಜತೆಯಾಗಿ ಇನ್ನೊಬ್ಬ ಕಾವಲಿಗನು ಬಂದು ನಿಂತನು. ಧರ್ಮವೀರ ಸ್ವಲ್ಪ ಮಿಡುಕಿಕೊಂಡನಾದರೂ, ರಾಜದರ್ಶನಕ್ಕೆ ಬಂದವ ರನ್ನು ಸ್ವಲ್ಪ ದೂರ ಕರೆದುಕೊಂಡು ಹೋಗಿ ತನ್ನ ಮಾಮೂಲನ್ನು ವಸೂಲು ಮಾಡಿಕೊಂಡೇಬಿಟ್ಟನು. ಇದನ್ನು ನೋಡಿ ಎರಡನೇ ಭಟ, "ಈ ಅನ್ಯಾಯ ವನ್ನು ನಾನು ರಾಜರೊಂದಿಗೆ ಹೇಳಬೇಕಾಗುತ್ತದೆ" ಎಂದು ಧರ್ಮವೀರನನ್ನು ಹೆದರಿಸಿದನು. "ನಿನಗೂ ಪಾಲು ಕೊಡುತ್ತೇನಯ್ಯ" ಎಂದ ಧರ್ಮವೀರ. ಆದರೆ ಎರಡನೇ ಭಟ ಪ್ರಾಮಾಣಿಕನಾಗಿದ್ದ. ಅಸಲು ಧರ್ಮವೀರನ ಮೇಲೆ ರಾಜನಿಗೆ ಸಂಶಯ ಬಂದುದ ರಿಂದಲೇ, ಆ ಎರಡನೇ ಭಟನನ್ನು ನಿಯಮಿಸಿದ್ದ.

ಈಗ ಧರ್ಮವೀರನು ರಾಜದರ್ಶನಕ್ಕಾಗಿ ಬರು ವವರೊಂದಿಗೆ, "ನೋಡಿದಿರಾ ಸ್ವಾಮಿ; ನೀವೆಲ್ಲ ಧರ್ಮ ಪ್ರಭುಗಳು. ನಾನು ನಿಮ್ಮ ಕೈಯಿಂದ ಲಂಚ ತೆಗೆದುಕೊಂಡೆ ಅಂತ ಇವನು ರಾಜನೊಂದಿಗೆ ಹೇಳುತ್ತಾನಂತೆ. ಅವನೇ ನಿಮ್ಮ ಹತ್ತಿರ ಲಂಚ ಕೇಳಿದನೆಂದು ನಾನೇ ಫಿರ್ಯಾದಿ ಮಾಡುತ್ತೇನೆ.

ಎ. ಎಸ್. ನಾರಾಯಣ



ನೀವು ನನ್ನಕಡೆಗೆ ಸಾಕ್ಷಿ ಹೇಳುವಿರಷ್ಟೆ?" ಎಂದನು. ಧರ್ಮವೀರ ಆ ಕೆಲಸದಲ್ಲಿ ಇಪ್ಪತ್ತು ವರ್ಷಗಳಿಂದ ಬೇರೂರಿ ಹೋದವನು. ಸಂದರ್ಶಕರಿಂದ ಲಂಚ ತಿಂದರೂ ಸಹ ಎಲ್ಲರ ಕೆಲಸಗಳನ್ನೂ ಯಾವುದೋ ಒಂದು ರೀತಿಯಾಗಿ ಸಾನುಕೂಲವಾಗುವಂತೆ ಮಾಡುತ್ತಿದ್ದನು. ಅವನು ಆ ಪ್ರದೇಶದಲ್ಲಿ ಇಲ್ಲದೆ ಹೋದರೆ ತಮ್ಮ ಅಗತ್ಯಗಳನ್ನು ತಿಳಿದು ತಮ್ಮ ಕಾರ್ಯಗಳನ್ನು ಸಾಧಿಸಿಕೊಡುವವನು ಬೇರೊಬ್ಬ ಸಿಕ್ಕದೆ ಹೋಗಬಹುದು. ಧರ್ಮವೀರನಂತೆ ಇನ್ನೊಬ್ಬನು ಸಹಕರಿಸದಿದ್ದರೆ ಕಷ್ಟವೇ. ಹೀಗೆಂದುಕೊಂಡು ಬಂದವರು ಧರ್ಮವೀರನ ಪಕ್ಷಕ್ಕೆ ಸಾಕ್ಷಿ ಹೇಳುವೆವೆಂದು ಒಪ್ಪಿದರು. ಆದರಿಂದ ಎರಡನೇ ಭಟನ ಆಟ ಕಟ್ಟಿಹೋಯಿತು. ಮಾತ್ರವಲ್ಲ, ಧರ್ಮವೀರ ರಾಜನ ಹತ್ತಿರ ತನ್ನ ಮೇಲೆ ದೂರು ಹೇಳದಂತೆ ಅವನೇ ತನ್ನ ಸಂಬಳದ ಐದನೇ ಒಂದು ಭಾಗವನ್ನು ಧರ್ಮವೀರನಿಗೆ ಕೊಡಬೇಕಾಯಿತು.

ಎರಡು ತಿಂಗಳು ಕಳೆಯಿತು. ತನ್ನ ಗಂಡ ಪೂರ್ತಿ ಸಂಬಳವನ್ನು ಮನೆಗೆ ತಂದುಕೊಡುವುದಿಲ್ಲವೆಂದು ಎರನೇ ಭಟನ ಹೆಂಡತಿ ತಕರಾರು ಮಾಡತೊಡಗಿದಳು. ಅಷ್ಟೇ ತನ್ನ ಸಂಬಳವೆಂದರೂ ಅವಳು ನಂಬಲಿಲ್ಲ. ಅವಳು ರಾಜನೊಂದಿಗೆ ತನ್ನ ಸಂದೇಹವನ್ನು ಬಿನ್ನವಿಸಿಕೊಂಡಳು.

ರಾಜನು ವಿಚಾರಣೆ ನಡೆಸಿ ನಿಜಸಂಗತಿ ತಿಳಿದುಕೊಂಡು ಧರ್ಮವೀರನನ್ನು ಗಂಟೆ ಹೊಡೆಯುವ ಕೆಲಸಕ್ಕೆ ಬದಲಾಯಿಸಿದನು.

ರಾಜನ ಕಾರ್ಯಾಲಯಗಳಲ್ಲಿ ಕೆಲಸ ಮಾಡುವ ಉದ್ಯೋಗಸ್ಥರನ್ನು ಧರ್ಮವೀರನು ಗುಟ್ಟಾಗಿ ಸಂಧಿಸಿ, ಸುಖದುಃಖ ಮಾತಾಡಿ ಒಳಿತು ಮಾಡಿಕೊಳ್ಳುತ್ತ, "ಈ ಕಾರ್ಯಾಲಯದಲ್ಲಿ ಕೆಲಸ ಮಾಡುವವರ ಕಾಲವು ಬೇಗ ಸಾಗುವಂತೆ ನಾನು ಮಾಡಬಲ್ಲೆ; ಅದಕ್ಕಾಗಿ ನೀವು ನನಗೆ ಸ್ವಲ್ಪ ಲಾಭ ದೊರಕಿಸಿಕೊಟ್ಟರೆ ಸಾಕು" ಎಂದು ಹೇಳಿದನು. ಕೆಲಸದ ಭಾರ ಹೆಚ್ಚಾಗಿರುವ ಉದ್ಯೋಗಸ್ಥರನೇಕ ಮಂದಿ ಅವನ ಮಾತಿಗೆ ಒಪ್ಪಿದರು. ಅಂಥವರೇ ಉಳಿದವರಿಂದಲೂ ಒಪ್ಪಿಗೆ ಗಳಿಸಿಕೊಟ್ಟರು.

ತಿಂಗಳುಗಳು ಉರುಳಿದುವು. ಧರ್ಮವೀರನು ಕ್ರಮವಾಗಿ ಕುಬೇರನಾಗುತ್ತಿದ್ದನು. ಅವನು ನಗರದ ಮಧ್ಯದಲ್ಲಿ ಒಳ್ಳೆಯ ಸ್ಥಳವನ್ನು ಕೊಂಡುಕೊಂಡು ಅಲ್ಲೊಂದು ದೊಡ್ಡ ಭವನವನ್ನು ಕಟ್ಟಿಸಿಕೊಂಡನು.

ಒಂದು ದಿನ ರಾಜನೊಂದಿಗೆ ಅತನ ಹೆಂಡತಿ, "ಅದೇನೋ ಗೊತ್ತಾಗುವುದಿಲ್ಲ. ಹಗಲು ಬಹಳ ಬೇಗ ಕಳೆಯುವ ಹಾಗೆ ಕಾಣುತ್ತದೆ. ಆದರೆ ಎಷ್ಟು ಹೊತ್ತಾದರೂ ಸಾಯಂಕಾಲ ಕಳೆಯುವುದಿಲ್ಲ. ಸೂರ್ಯನಿಗೆ ಏನೋ ಆಗಿದೆ" ಎಂದಳು. ಚಂದ್ರವರ್ಮ ರಾಜನಿಗೂ ಅನುಮಾನವಿತ್ತು. ಆವನು ಮರುದಿನ ತನ್ನ ಅಂತಃಪುರದ ಮರಳು ಗಡಿಯಾರದ ಹತ್ತಿರವೇ ಕುಳಿತು ನೋಡತೊಡಗಿದನು.

ಕಾರ್ಯಾಲಯಗಳಲ್ಲಿ ಕೆಲಸ ಪ್ರಾರಂಭಿಸುವ ವರೆಗೂ ಧರ್ಮವೀರನು ಹೊಡೆಯುವ ಗಂಟೆಗಳು ಸರಿಯಾಗಿಯೇ ಇದ್ದುವು. ಆಮೇಲೆ ಮರಳು ಗಡಿಯಾರದಲ್ಲಿ ಗಂಟೆ ಹೊತ್ತು ಆಗುವುದಕ್ಕೆ ಮೊದಲೇ ಧರ್ಮವೀರನು ಗಂಟೆ ಹೊಡೆಯುತ್ತಿರಲು ಕಡೆಗೆ ಒಂದು ಗಂಟೆ ವ್ಯತ್ಯಾಸವು ಬಂದಿತ್ತು. ಅಂದರೆ ಕಾರ್ಯಾಲಯದ ಕೆಲಸ ಮುಗಿಯಬೇಕಾದ ಹೊತ್ತಿಗಿಂತಲೂ ಒಂದು ಗಂಟೆ ಮೊದಲೇ ಮುಗಿಯುತ್ತದೆಂದಾಯಿತು!

ಇದು ಧರ್ಮವೀರನ ಕೀಲಕವೆಂದು ಚಂದ್ರವರ್ಮನಿಗೆ ಗೊತ್ತಾಯಿತು. ಅವನು ಧರ್ಮವೀರನನ್ನು ಸಭೆಗೆ ಕರೆಯಿಸಿ, ವಿಚಾರಣೆ ನಡೆಯಿಸಿ, ಉದ್ಯೋಗಸ್ಥರಿಂದ ಅವನು ಲಂಚ ವಸೂಲು ಮಾಡಿಕೊಂಡು, ಅನ್ಯಾಯ ಮಾಡುವ ಸಂಗತಿಯನ್ನು ನಿರೂಪಿಸಿದನು. ಆದರೆ ಅನೇಕ ವರ್ಷಗಳಿಂದ ಆಸ್ಥಾನದ ಸೇವೆಯಲ್ಲಿದ್ದ ಧರ್ಮವೀರನನ್ನು ನಿರುದ್ಯೋಗಿಯನ್ನಾಗಿ ಮಾಡಲು ರಾಜನಿಗೆ ಇಷ್ಟವಿರಲಿಲ್ಲ. ಅವನ ಆಟ ಸಾಗದಂತೆ ಮಾಡಲು, ಅವನನ್ನು ಯಾವನಾದರೂ ಕಠಿಣ ಸ್ವಭಾವದ ಅಧಿಕಾರಿಯ ಹತ್ತಿರ ಹಾಕಿಬಿಟ್ಟರೆ ಒಳ್ಳೆಯದೆಂದು ರಾಜನಿಗೆ ತೋರಿತು.

ಚಂದ್ರವರ್ಮ ರಾಜನ ಸೈನ್ಯಾಧಿಕಾರಿ ಮಹಾ ಕಾರ್ಕೋಟಕನೆಂದೂ, ಶತ್ರುಭಯಂಕರನೆಂದೂ ಪ್ರಸಿದ್ಧನಾದವನು. ಆತನ ಸೇವಕನಾಗಿ ಧರ್ಮವೀರನು ನಿಯಮಿಸಲ್ಪಟ್ಟನು. ಈ ಹೊಸ ಉದ್ಯೋಗದಲ್ಲಿ ಧರ್ಮವೀರನು ತನ್ನ ಕೆಲಸಗಳನ್ನು ಜಾಗರೂಕತೆಯಿಂದ ಮಾಡುತ್ತಿದ್ದನು.

ಒಂದು ದಿನ ಸಾಯಂಕಾಲ ಧರ್ಮವೀರನು ಸೇನಾಧಿಪತಿಯ ಮನೆಯ ತೋಟದ ಗಿಡಗಳಿಗೆ ನೀರು ಹೊಯ್ಯುತ್ತಿದ್ದ. ತೋಟದ ಕಡೆಗಿದ್ದ ಕೋಣೆಯಲ್ಲಿ ಸೈನ್ಯಾಧಿಕಾರಿಯೂ ಅವನ ಹೆಂಡತಿಯೂ ಏನೋ ಮಾತಾಡಿಕೊಳ್ಳುತ್ತಿದ್ದರು. ಸಾಧಾರಣವಾದ



ಮಾತುಕತೆ ಏನೋ ವಿವಾದಕ್ಕಿಟ್ಟು ಮಾತುಗಳು ಬಿಸಿಯಾದುವು. ಧರ್ಮವೀರನು ಕಿಟಕಿಯ ಬಳಿಗೇ ಬಂದು ಕಿವಿಗೊಟ್ಟು ಕೇಳತೊಡಗಿದ. ಸೈನ್ಯಾಧಿಕಾರಿಯ ಹೆಂಡತಿ ಯಾಕೋ ಕೋಪಕೆಂಡವಾಗಿದ್ದಳು. ಸೈನ್ಯಾಧಿಕಾರಿ ಹೊರಗೆ ಹುಲಿಯಾಗಿದ್ದರೂ ಮನೆಯಲ್ಲಿ ಹೆಂಡತಿಯ ಮುಂದೆ ಬೆಕ್ಕು. ಅವನ ಹೆಂಡತಿ ಕೋಪವನ್ನು ತಾಳಲಾರದೆ ಕೈಗೆ ಸಿಕ್ಕಿದ ವಸ್ತುವನ್ನು ತೆಗೆದು ಗಂಡನನ್ನು ಹೊಡೆದಳು.

ಸೈನ್ಯಾಧಿಕಾರಿ ತನ್ನನ್ನು ಯಾರಾದರೂ ನೋಡಿದರೇನೋ ಎಂದು ಅತ್ತಿತ್ತ ನೋಡುವಾಗ, ಕಿಟಕಿಯ ಸಂದಿನಿಂದ ಧರ್ಮವೀರನು ಹೊಂಚಿಕೊಂಡಿರುವುದನ್ನು ನೋಡಿದ. ಅವನಿಗೆ ಅವಮಾನದಿಂದ ತಲೆ ಹಾರಿಸಿದ ಹಾಗಾಯಿತು. ಅವನು ಹೆಂಡತಿಯನ್ನು ಸಮಾಧಾನ ಪಡಿಸಲಾರದೆ, ತೋಟಕ್ಕೆ ಹೋಗಿ ಧರ್ಮವೀರನು ಹೊಂಚಿ ನೋಡಿದುದಕ್ಕೆ ನಾಲ್ಕು ಬಿಗಿಯಬೇಕೆಂದುಕೊಂಡನು.



ಆದರೆ ಧರ್ಮವೀರನು ಯಜಮಾನನನ್ನು ನೋಡಿದ ಕೂಡಲೇ, ರೇಗಿಕೊಂಡವನಂತೆ, "ಸಾಕು ಬಿಡಿ ಮಹಾ ಧರ್ಮಪ್ರಭುಗಳಂತೆ! ಎಷ್ಟೇ ಪ್ರೇಮ ವಿದ್ದ ಮಾತ್ರಕ್ಕೆ ಹೆಂಡತಿಯಿಂದ ಯಾರಾದರೂ ಹೊಡೆಸಿಕೊಳ್ಳುತ್ತಾರೇನು? ಇದು ಚೆನ್ನಾಗಿಲ್ಲ ಸ್ವಾಮಿ! ಹೊರಗೆ ಗೊತ್ತಾಗಿಬಿಟ್ಟರೆ ಎಷ್ಟು ಅವಮಾನ! ಛೀ!" ಎಂದನು.

ಸೈನ್ಯಾಧಿಕಾರಿಗೆ ಅವನ ಮಾತುಗಳು ಚುರುಕ್ಕೆಂದುವು. ಈ ಸಂಗತಿಯನ್ನು ಯಾರ ಮುಂದೂ ಹೇಳಬೇಡವೆಂದು ಅವನೊಡನೆ ಅಂಗಲಾಚಿದನು.

"ಹಾಗೆಲ್ಲಾ ನಾನೇಕೆ ಹೇಳುತ್ತೇನೆ ಸ್ವಾಮಿ? ಆದರೆ ಮಹಾರಾಜರು ನನ್ನನ್ನು 'ಏನೋ, ಸೈನ್ಯಾಧಿಕಾರಿಗಳ ಮನೆಗೆಲಸ ನಿನಗೆ ಸರಿಯಾಗಿದೆಯೆ? ಆ ಮನೆಯವರು ಹೇಗೆ?' ಅಂತ ಕೇಳಿದರೆ ನಿಜ ಸಂಗತಿಯನ್ನು ಅಡಗಿಸಿಡಲಾಗದಷ್ಟೇ? ಮಹಾರಾಜರು ಯಾವ ರಹಸ್ಯ ತಿಳಿಯಲು ಯಾರ ಹತ್ತಿರ ಯಾವ ಹೊತ್ತಿಗೆ ಏನು ಕೇಳುವರೋ ಬಲ್ಲವರಾರು?" ಎಂದ ಧರ್ಮವೀರ.

ಧರ್ಮವೀರನ ಬಾಯಿ ಮುಚ್ಚಿಸಲು ಸೈನಾಧಿಕಾರಿ ಅವನಿಗೆ ಲಂಚ ಕೊಡಲೇ ಬೇಕಾಯಿತು. ಆಮೇಲೆ ಯಾವುದೋ ಒಂದು ನೆವನದಲ್ಲಿ ಸೈನಾಧಿಕಾರಿಯ ಹೆಂಡತಿಯ ಕೈಯಿಂದಲೂ ಲಂಚ ಪಡೆಯ ತೊಡಗಿದ. ಹುಲಿಯಂತಹ ಸೈನ್ಯಾಧಿಕಾರಿಯೂ ಅವನ ಹೆಂಡತಿಯೂ ಧರ್ಮವೀರನ ಹತ್ತಿರ ಬೆಕ್ಕುಗಳಂತಾಗಿ ಹೋದರು. ಈ ಸಂಗತಿ ಬೇರೆ ನೌಕರರ ಮೂಲಕವಾಗಿ ರಾಜನ ಕಿವಿಗೂ ಸೇರಿತು.

ರಾಜನಿಗೆ ಆಶ್ಚರ್ಯವಾಯಿತು. ಅವನು ಧರ್ಮವೀರನನ್ನು ಕರೆಯಿಸಿ ನಿಜಸಂಗತಿ ಏನೆಂಬುದನ್ನು ಸ್ವತಃ ವಿಚಾರಿಸಿ ಎಲ್ಲಾ ಸಮಾಚಾರವನ್ನೂ ತಿಳಿದುಕೊಂಡನು. ಗಂಡಹೆಂಡಿರ ರಹಸ್ಯ ಸಂಭಾಷಣೆಗಳನ್ನು ಹೊಂಚಿ ಕೇಳಿದುದಕ್ಕೂ, ಒಬ್ಬ ಅಧಿಕಾರಿಯನ್ನು ಪೀಡಿಸಿ ಲಂಚ ಪಡೆದುದಕ್ಕೂ ರಾಜನು ಧರ್ಮವೀರನನ್ನು ಕೆಲಸದಿಂದ ತೊಲಗಿಸಿಬಿಟ್ಟನು. ಅದಕ್ಕಾಗಿ ಧರ್ಮವೀರನು ಚಿಂತಿಸಲಿಲ್ಲ. ಆಗಲೇ ಸಾಕಷ್ಟು ಸಂಪಾದನೆ ಮಾಡಿದುದರಿಂದ ಉದ್ಯೋಗ ಹೋದುದಕ್ಕೆ ಅವನೇನೂ ದುಃಖಪಡಲಿಲ್ಲ.

ಆದರೂ ಅವನು ಸುಮ್ಮನಿರುವ ಘಟವಲ್ಲ. ನಿರುದ್ಯೋಗಿಗಳಾಗಿದ್ದ ನಾಲ್ಕಾರು ಯುವಕರನ್ನು ಹತ್ತಿರ ಮಾಡಿಕೊಂಡು, ಅವರ ಹಾಲ ಹವಾಲೆಗಳಿಗೆ ಮರುಗಿ, ಸ್ವಲ್ಪ ಸಂಬಳದ ಮೇಲೆ ತಾನೇ ಅವರಿಗೆ ಕೆಲಸಕೊಟ್ಟನು. ಅವರು ಮಾಡಬೇಕಾದ ಕೆಲಸವೇನೆಂದರೆ, ಅವರು ಪೇಟೆಯ ಬೀದಿಗಳಲ್ಲಿ ತಿರುಗಾಡುತ್ತ, ತಮಗೆ ವಿಚಿತ್ರವಾಗಿ, ಆಶ್ಚರ್ಯವಾಗಿ, ಬೀಭತ್ಸವಾಗಿ, ದುಃಖಕರವಾಗಿ, ಕುತೂಹಲಕಾರಿಯಾಗಿ ಸಂತೋಷಪ್ರದವಾಗಿ ಯಾವುದನ್ನು ನೋಡಿದರೂ ತಿಳಿದರೂ, ಆ ಘಟನೆಗೆ ಸಂಬಂಧಿಸಿದ ಮನುಷ್ಯರನ್ನು ಕುರಿತು ತಮ್ಮ ಹತ್ತಿರವಿರುವ

ಪುಸ್ತಕಗಳಲ್ಲಿ ಬರೆದುಕೊಂಡು, ರಾತ್ರಿಯಲ್ಲಿ ಧರ್ಮ ವೀರನಿಗೆ ತಂದು ತೋರಿಸಬೇಕು. ಅವರು ಬರೆದ ವಿಷಯಗಳ ಪ್ರಾಧಾನ್ಯತೆಯನ್ನು ನೋಡಿ, ಅಂತಹವು ಗಳನ್ನು ಧರ್ಮವೀರನು ತನ್ನ ಖಾತಾ ಪುಸ್ತಕದಲ್ಲಿ ಬರೆದುಕೊಳ್ಳುವನು.

ಹೀಗೆ ಧರ್ಮವೀರನ ಖಾತಾ ಪುಸ್ತಕ ತುಂಬುವ ಸಂಗತಿ ಆ ಯುವಕರಿಂದಲೇ ಎಲ್ಲೆಲ್ಲೂ ಹರಡಿತು. ಜನರೊಳಗೆ ಯಾರಿಗೂ ಗೊತ್ತಿಲ್ಲದ ವಿಷಯಗಳೇನಾದರೂ ಪ್ರಸ್ತಾವಿಸಿದರೆ, "ಅದು ಧರ್ಮವೀರನ ದಫ್ತರದಲ್ಲಿ ಇದ್ದೀತು" ಎಂದು ಹೇಳುತ್ತಿದ್ದರು. ಇದೊಂದು ಲೋಕೋಕ್ತಿಯೇ ಆಯಿತು. ಯಾರಿಗಾದರೂ ಏನಾದರೂ ತಿಳಿಯಬೇಕಾಗಿದ್ದರೆ, ಧರ್ಮವೀರನಬಳಿಗೆ ಬಂದು ಹಣಕೊಟ್ಟು ಓದಿಸುವರು.

ಆ ವರ್ಷದಲ್ಲಿ ದಸರೆಯ ಉತ್ಸವ ನಗರದಲ್ಲಿ ತುಂಬ ವೈಭವದಿಂದ ನಡೆಯಿತು. ದೂರದೂರದ ರಾಜರುಗಳೂ, ಜಮೀನುದಾರರೂ ಬಂದು ಉತ್ಸವಗಳಲ್ಲಿ ಭಾಗವಹಿಸಿದರು. ಕಡೆಗೆ ಅಂತಹ ದೊಡ್ಡ ದೊಡ್ಡವರೆಲ್ಲ ಸೇರಿ ಚಂದ್ರವರ್ಮ ಮಹಾರಾಜನಿಗೆ ಅನೇಕ ಲಕ್ಷ ಬೆಲೆಬಾಳುವ ವಜ್ರದುಂಗುರವನ್ನು ಬಹುಮಾನವಾಗಿ ಕೊಟ್ಟರು. ಉತ್ಸವಗಳೆಲ್ಲ ಮುಗಿದುವು. ಬಂದವರೆಲ್ಲ ತಮ್ಮ ತಮ್ಮ ಊರುಗಳಿಗೆ ಹೊರಟುಹೋದರು. ಆಗ ರಾಜಾ ಚಂದ್ರವರ್ಮನ ಬೆರಳಿನಲ್ಲಿದ್ದ ಬಹುಮಾನದ ವಜ್ರದುಂಗುರ ಕಾಣೆಯಾಗಿ ಹೋಗಿತ್ತು. ರಾಜಭಟರೂ, ಇತರ ಉದ್ಯೋಗಿಗಳೂ ಅದನ್ನು ಹುಡುಕಿ ಹುಡುಕಿ ಬೇಸತ್ತು "ಇನ್ನು ಈ ಉಂಗುರದ ಜಾಡು ಸಿಕ್ಕಿದರೆ ಧರ್ಮವೀರನ ದಫ್ತರದಲ್ಲೇ ಸಿಗಬೇಕು!" ಎಂದು ನಿಟ್ಟುಸಿರುಬಿಟ್ಟರು.

ಅದನ್ನೂ ನೋಡಿ ಕೈ ತೊಳೆದು ಕೊಳ್ಳೋಣವೆಂದು ಮಂತ್ರಿಗಳು ಹೇಳಲು, ರಾಜನು ಧರ್ಮವೀರನನ್ನು ಅವನ ಖಾತಾ ಪುಸ್ತಕದೊಂದಿಗೆ ಕರೆಯಿಸಿದನು. "ನಿನ್ನ ಖಾತಾವಣಿಯಲ್ಲಿ ಹತ್ತನೇ ದಿನದ ಉತ್ಸವದಲ್ಲಿ ನಡೆದ ವಿಶೇಷವೇನಾದರೂ ಇದೆಯೆ?" ಎಂದು ರಾಜನು ಧರ್ಮವೀರನನ್ನು ಕೇಳಿದ. ಧರ್ಮ



ವೀರನು ತನ್ನ ದಪ್ಪವಾದ ದರಖಾಸ್ತು ಗ್ರಂಥದೊಳಗಿನ ಪುಟಗಳನ್ನು ತಿರುಗಿಸಿ. ರಾಜನು ಅಪೇಕ್ಷಿಸುವ ದಿನದಲ್ಲಿ ನಡೆದ ವಿಶೇಷಗಳನ್ನು ಓದುತ್ತಾ ಹೋದನು. ಕಥಾ ಕಾಲಕ್ಷೇಪದಂತೆ ರಾಜನೂ ಕೇಳುತ್ತಾ ಬಂದ. ಒಂದುಕಡೆ ಧರ್ಮವೀರ "ದಕ್ಷಿಣದ ಬೀದಿಯಲ್ಲಿ ಒಂದುಕಡೆ ಮಹಾರಾಜರ ಮಾವಟಿಗನು ಪಟ್ಟದಾನೆಯನ್ನು ಕಟ್ಟಿ ಹಾಕಿ, ಥಕ್ಕನೆ ಅವಸರದ ನೆನಪಾದಂತೆ ತನ್ನ ಮನೆಗೆ ಓಡುತ್ತಾ ಹೋದ..." ಎಂದು ಓದಿದಾಗ ರಾಜನಿಗೆ ಏನೋ ಸ್ಫುರಿಸಿ "ಈ ವಾರ್ತೆ ನಿನಗೆ ಕೊಟ್ಟ ಯುವಕನನ್ನು ಕರೆಸು" ಎಂದ.

ಆ ಯುವಕನು ಬಂದು, ರಾಜನ ಅಪ್ಪಣೆಯಂತೆ ರಾಜನ ಮಾವಟಿಗರಲ್ಲಿ ತಾನು ನೋಡಿದ ಮಾವಟಿಗನ ಗುರುತು ಹಿಡಿದ. ರಾಜನು ಆ ಮಾವಟಿಗನನ್ನು ಕುರಿತು, "ಆ ದಿನ ಪಟ್ಟದಾನೆಯನ್ನು ನಡು ಬೀದಿಯಲ್ಲಿ ಕಟ್ಟಿ ಎಲ್ಲಿಗೋ ಓಡಿದೆಯಲ್ಲ? ಎಲ್ಲಿಗೆ ಓಡಿದೆ? ಏಕೆ ಓಡಿದೆ?" ಎಂದು ಕೇಳಿದ.

"ಅವಸರವಾಗಿ ಮನೆಯ ವಿಷಯ ಜ್ಞಾಪಕ ಬಂದು ಹಾಗೆ ಓಡಿದೆ ಪ್ರಭುಗಳೇ. ಆ ದಿನ ತಾವು ಆನೆಯಿಂದ ಇಳಿದು ಕಾಲು ನಡಿಗೆಯಿಂದಲೇ ಅರಮನೆಗೆ ದಯಮಾಡಿದಿರಿ. ತಪ್ಪು ಕ್ಷಮಿಸಬೇಕು" ಎಂದು ಬೇಡಿಕೊಂಡ ಮಾವಟಿಗ.

ಆಗ ಧರ್ಮವೀರನ ಕಡೆಯ ಯುವಕ, "ನಿನ್ನೆ ಈ ಮಾವಟಿಗನ ಹತ್ತಿರ ಇವನ ಹೆಂಡತಿ ಪಟ್ಟೆ ಸೀರೆ ಮತ್ತು ಮುತ್ತುಗಳ ಮಾಲೆ ಬೇಕೇಬೇಕೆಂದು ಹಟ ಹಿಡಿಯುವುದು ನನ್ನ ಕಿವಿಗೆ ಬಿತ್ತು. ಇವನು ಅವಸರ ಪಡಬೇಡವೆಂದು ಅವಳಿಗೆ ಬುದ್ಧಿ ಹೇಳುತ್ತ ಗದರಿಸಿಕೊಂಡಿದ್ದ. ಅದು ಕೂಡಾ ಬರೆದು ಕೊಂಡಿದ್ದೇವೆ. ದರಖಾಸ್ತಿನಲ್ಲಿರಬಹುದು, ನೋಡಿರಿ" ಎಂದನು.

ಆ ಸಂಗತಿ ಕೂಡಾ ದರಖಾಸ್ತಿನಲ್ಲಿತ್ತು! ಕೂಡಲೇ ರಾಜನು ಮಾವಟಿಗನನ್ನು ನೋಡಿ, "ನಿನಗೆ ಅಷ್ಟೊಂದು ಹಣ ಹೇಗೆ ಬಂತೆಂದುಹೇಳುವಿಯಾ? ಅಲ್ಲ ಗಲ್ಲಿಗೇರುವಿಯಾ?" ಎಂದು ಕೇಳಿದ.

ಮಾವಟಿಗನು ಗಡಗಡ ನಡುಗುತ್ತ, ರಾಜನು ಆ ದಿನ ಪಟ್ಟದಾನೆಯಿಂದ ಇಳಿಯುವ ಸಡಗರದಲ್ಲಿ ಬೆರಳಿನಿಂದ ಉಂಗುರ ಜಾರಿ ಬಿದ್ದಿತೆಂದೂ, ಅದನ್ನು ತಾನು ತಟ್ಟನೆ ಹೆಕ್ಕಿಕೊಂಡೆನೆಂದೂ ಹೇಳಿ, ಹೆಂಡತಿ ಅದನ್ನು ಈಗಲೇ ಮಾರಿ ತನಗೆ ಬೇಕಾದುದನ್ನು ಮಾಡಿಸಬೇಕೆಂದು ಹಟ ಹಿಡಿಯುತ್ತಾಳೆಂದೂ ಹೇಳಿದ.

ಉಂಗುರ ಸಿಕ್ಕಿತು. ಧರ್ಮವೀರನನ್ನೂ, ಯುವಕರನ್ನೂ ಹೇಗೆ ಉಪಯೋಗಿಸಬೇಕೆಂಬುದೂ ರಾಜನಿಗೆ ತಿಳಿಯಿತು. ರಾಜನು ಯುವಕರನ್ನು ಗೂಢಚಾರರನ್ನಾಗಿ ನಿಯಮಿಸಿ ಅವರಿಗೆ ಮಂತ್ರಿಗಳಿಗೆ ಸಮಾನವಾದ ಸಂಬಳವನ್ನೇ ನಿರ್ಣಯಿಸಿದನು.





# ಅನ್ಯರ ಸಲಹೆ

ಒಂದಾನೊಂದು ಊರಿನ ಹೊರ ಬದಿಯಲ್ಲಿ ಸ್ಮಶಾನ ಪ್ರದೇಶವಿದ್ದಿತು. ಅಲ್ಲಿ ಅನೇಕ ಪಿಶಾಚಿಗಳು ಬಂದು ಸೇರಿದ್ದುವು. ಅವುಗಳಲ್ಲಿ ಒಂದು ವೃದ್ಧ ಪಿಶಾಚಿಯೂ ಇತ್ತು. ಇತರ ಪಿಶಾಚಿಗಳು ವೃದ್ಧ ಪಿಶಾಚಿಯನ್ನು ತುಂಬ ಅನುಭವದ ಪಿಶಾಚಿ ಎಂದು ನಂಬಿದ್ದುವು. ಪಿಶಾಚಿಗಳಿಗೆ ಏನಾದರೂ ಸಮಸ್ಯೆಗಳುಂಟಾದಾಗ ವೃದ್ಧಪಿಶಾಚಿಯ ಹತ್ತಿರ ಸಲಹೆ ಕೇಳುತ್ತಿದ್ದುವು.

ಒಂದು ದಿನ ಆ ವೃದ್ಧಪಿಶಾಚಿ ಕಾಡಿನಲ್ಲಿ ಬಹಳ ಹೊತ್ತು ತಿರುಗಾಡಿ ಒಂದು ಪಾಳುಬಿದ್ದ ಇಳಿಬಾವಿಯ ಮೇಲಿನ ಮೆಟ್ಟಿಲಲ್ಲಿ ಕುಳಿತುಕೊಂಡಿತು. ಸ್ವಲ್ಪ ಹೊತ್ತಿನಲ್ಲಿ "ಯಾರದೂ, ನನ್ನ ಸ್ಥಳದಲ್ಲಿ ಕೂತುಕೊಂಡವರು ?" ಎಂಬ ಮಾತನ್ನು ಕೇಳಿ ವೃದ್ಧಪಿಶಾಚಿ ತಲೆಯೆತ್ತಿ ನೋಡಿತು. ಬಳಿಯಲ್ಲಿ ಒಂದು ಹೆಣ್ಣು ಪಿಶಾಚಿ ನಿಂತಿತ್ತು. "ಇದು ನಿನ್ನ ಸ್ಥಳವೇನೇ ? ಆದರೇನಾಯಿತೇ ? ನೀನು ಕೂಡಾ ಇಲ್ಲಿ ಕೂತುಕೋ ?" ಎಂದಿತು ವೃದ್ಧ ಪಿಶಾಚಿ.

ಹೆಣ್ಣು ಪಿಶಾಚಿ ವೃದ್ಧಪಿಶಾಚಿಯ ಪಕ್ಕದಲ್ಲೇ ಕುಳಿತುಕೊಂಡಿತು. ಆದರ ಹತ್ತಿರ ವೃದ್ಧಪಿಶಾಚಿ ಉತ್ಸಾಹದಿಂದ, "ನಾನು ಇಲ್ಲಿಗೆ ಹತ್ತಿರದಲ್ಲೇ ಸ್ಮಶಾನದಲ್ಲಿರುತ್ತೇನೆ. ಪಿಶಾಚಿಗಳಿಗೆ ಏನು ಸಮಸ್ಯೆ ಬಂದರೂ ನನ್ನನ್ನು ಸಲಹೆ ಕೇಳುತ್ತಾರೆ." ಎಂದು ಹೆಣ್ಣು ಪಿಶಾಚಿಗೆ ತನ್ನ ಪರಿಚಯ ಮಾಡಿಕೊಟ್ಟಿತು.

ಅದನ್ನು ಕೇಳಿ ಹೆಣ್ಣು ಪಿಶಾಚಿಗೆ ಏನೋ ಉತ್ಸಾಹ ಬಂದಂತೆ ತೋರಿತು. "ನನಗೂ ಒಂದು ಸಮಸ್ಯೆಯಿದೆ. ಏನು ಮಾಡಬೇಕೋ ಗೊತ್ತಾಗೋದಿಲ್ಲ. ನೀನಾದರೂ ಸಹಾಯ ಮಾಡಲಾರೆಯಾ ?" ಎಂದಿತು ಹೆಣ್ಣು ಪಿಶಾಚಿ. "ನಿನ್ನ ಸಮಸ್ಯೆಯೇನೆಂಬುದನ್ನು ಹೇಳು ಮತ್ತೆ" ಎಂದು ವೃದ್ಧಪಿಶಾಚಿ ಹೇಳಲು, ಹೆಣ್ಣು ಪಿಶಾಚಿ ಹೀಗೆ ವಿವರಿಸಿ ಹೇಳಿತು :

ಅದು ವಾಸ ಮಾಡುವ ಆಲದ ಮರದ ಹತ್ತಿರದಲ್ಲೇ ಒಂದು ಪಾಳು ಬಿದ್ದ ಮನೆಯಿತ್ತು. ಒಂದು ತಿಂಗಳ ಕೆಳಗೆ ಆ ಮನೆಯನ್ನು ಸ್ವಲ್ಪ ಏನೋ ದುರಸ್ತಿ ಮಾಡಿ ಒಬ್ಬ ಸಂಗೀತದ ಮಾಸ್ತರು ಆಕ್ರಮಿಸಿಕೊಂಡಿದ್ದಾನೆ. ಅವನಿಂದ ಪೀಡೆ ಶುರುವಾಯಿತು. ಅವನ ಹತ್ತಿರ ಸಂಗೀತ ಕಲಿಯಲು ಊರೊಳಗಿನಿಂದ ಅನೇಕ ಮಂದಿ ಹುಡುಗರೂ ಹುಡುಗಿಯರೂ ಬರುತ್ತಿದ್ದರು. ಇಡೀ ದಿನ ಸಂಗೀತ ಪಾಠ ನಡೆಯುತ್ತಿರುತ್ತೆ, ಒಂದೇ

ಎಂ. ಕೆ. ಈಶ್ವರರಾವ್



ರಗಳೆ! ಇಷ್ಟು ಕಾಲದ ವರೆಗೆ ಪ್ರಶಾಂತವಾಗಿ ದಿನ ಕಳೆಯುತ್ತಿದ್ದ ಹೆಣ್ಣು ಪಿಶಾಚಿಗೆ ಆ ಮೇಳದ ಗೋಳು ತಾಳಲಾರದಾಗಿದೆ. ಹೇಗಾದರೂ ಆ ಸಂಗೀತ ಮಾಸ್ತರನ್ನು ಅಲ್ಲಿಂದ ಓಡಿಸಿಬಿಡಬೇಕಿತ್ತು.

ವೃದ್ಧ ಪಿಶಾಚಿ ಕಿಚಿಕಿಚಿ ನಕ್ಕು "ಪ್ಹೂ! ಇದೊಂದು ದೊಡ್ಡ ಸಮಸ್ಯೆ ಅನ್ನುವಿಯಲ್ಲಾ! ಇದಕ್ಕಿಂತ ಕಠಿಣವಾದ ಸಮಸ್ಯೆಗಳನ್ನು ಪರಿಹರಿಸಿಬಿಟ್ಟಿದ್ದೇನೆ! ನೀನು ನಾನು ಹೇಳಿದ ಹಾಗೆ ಮಾಡು. ಸಮಸ್ಯೆ ತೀರಿ ಹೋಗುತ್ತದೆ." ಎಂದು ಹೆಣ್ಣು ಪಿಶಾಚಿಯ ಕಿವಿಯಲ್ಲಿ ಅದು ಮಾಡಬೇಕಾದುದನ್ನು ಹೇಳಿತು.

ವೃದ್ಧ ಪಿಶಾಚಿಯ ಸಲಹೆಯನ್ನು ಕೇಳಿ ಹೆಣ್ಣು ಪಿಶಾಚಿ ಅತ್ಯಂತ ಸಂತೋಷಪಟ್ಟು, ಆ ದಿನ ರಾತ್ರಿಯಲ್ಲಿ ಸಂಗೀತದ ಮಾಸ್ತರ ಮನೆಗೆ ಹೋಗಿ, ಕಂಟ ಬೆಕ್ಕಿನ ರೂಪ ತಾಳಿ ವಿಕಾರ ದನಿಯಿಂದ ಕೂಗುತ್ತ, ಕಿಟಕಿಯಿಂದ ಮಾಸ್ತರ ಕೋಣೆಯೊಳಗೆ ಹಾರಿತು. ಆ ಶಬ್ದಕ್ಕೆ ಮಾಸ್ತರಿಗೆ ಎಚ್ಚರವಾಯಿತು. ನಾಲ್ಕು ಸುತ್ತಲೂ ಪಿಳಿಪಿಳಿ ನೋಡಿದಾಗ, ಕಂಟ ಬೆಕ್ಕೊಂದು ಪಿಶಾಚಿಯಾಗಿ ಬದಲಾಯಿಸುವುದನ್ನು ನೋಡಿ ಮಾಸ್ತರ ಎದೆ ಡವಡವ ಅಂದಿತು. ಆದರೂ ಧೈರ್ಯವನ್ನು ತಂದುಕೊಂಡು, "ಯಾರು ನೀನು? ಈ ವೇಳೆಯಲ್ಲಿ ಇಲ್ಲಿ ನಿನಗೇನು ಕೆಲಸ?" ಎಂದು ಕೇಳಿದರು.

ಪಿಶಾಚಿ ಬಿದ್ದು ಬಿದ್ದು ನಕ್ಕು "ನಾನು ಬಹಳ ಕೆಟ್ಟ ಪಿಶಾಚಿ! ನನ್ನನ್ನು ಕೇಳಲಿಕ್ಕೆ ನಿನಗೇನು ಅಧಿಕಾರ? ನನ್ನ ಇಷ್ಟ ಬಂದ ರೂಪದಲ್ಲಿ ನಾನು ಈ ಮನೆಯೊಳಗೆ ತಿರುಗಾಡುತ್ತೇನೆ. ನೋಡು ಬೇಕಾದರೆ!" ಎಂದು ಹೇಳಿ, ಬಾವಲಿಯ ರೂಪತಾಳಿ ಭರ್ ಭರ್ ತಿರುಗ ತೊಡಗಿತು.

"ನಿನ್ನ ಪುಣ್ಯ ಪಿಶಾಚಿಯಮ್ಮಾ! ಈಗ ಮೊದಲಿದ್ದಂತೆ ಬೆಕ್ಕಿನ ರೂಪದಲ್ಲಿ ಮನೆ ತುಂಬಾ ತಿರುಗಾಡಿಕೊಂಡಿರ ಬಾರದೇ? ಎಷ್ಟು ಚೆನ್ನಾಗಿದೆ ಆ ರೂಪ? ಇಲಿಗಳ ಗಲಾಟೆ ತುಂಬ ಜಾಸ್ತಿಯಾಗಿದೆ. ಅವುಗಳನ್ನೆಲ್ಲಾ ತೀರಿಸಿ, ಆಮೇಲೆ ಹಲ್ಲಿಯ ರೂಪತಾಳಿ ನುಸಿಗಳನ್ನೆಲ್ಲಾ ನುಂಗಿಬಿಡು" ಎಂದರು ಸಂಗೀತಮಾಸ್ತರು.

ಹೆಣ್ಣು ಪಿಶಾಚಿ ರೋಷದಿಂದ, "ನಿನ್ನಿಷ್ಟ ಪ್ರಕಾರ ಇರಲು ನಾನೇನು ನಿನ್ನ ತೊತ್ತೇ?" ಎಂದು ಹೇಳಿ ಸರ್ರನೆ ಹೊರಟುಹೋಯಿತು.

ಮಾರನೇದಿನ ಆ ಹೆಣ್ಣು ಪಿಶಾಚಿ ಬಾವಿಯ ಮೆಟ್ಟು ಕಲ್ಲಿನ ಮೇಲೆ ವೃದ್ಧ ಪಿಶಾಚಿಯನ್ನು ನೋಡಿ, "ನೀನು ಹೇಳಿ ಕೊಟ್ಟ ಉಪಾಯ ನಡೆಯಲಿಲ್ಲ, ಆ ಸಂಗೀತ ಮಾಸ್ತರು ಒಳ್ಳೇ ಗಟ್ಟಿ ಪಿಂಡ!" ಎಂದು ಮುಖಸೊಟ್ಟಗೆ ಮಾಡಿಕೊಂಡಿತು.

"ಒಂದು ಉಪಾಯ ನಾಟದಿದ್ದರೆ ಕೊಂಪೆ ಮುಳುಗೋದೇನಿಲ್ಲ. ಇನ್ನೊಂದು ಉಪಾಯ ನಾಟುತ್ತೆ. ನಿರಾಶೆ ತಾಳಬೇಡ" ಎಂದು ವೃದ್ಧ ಪಿಶಾಚಿ ಹೆಣ್ಣು ಪಿಶಾಚಿಯ ಕಿವಿಯಲ್ಲಿ ಇನ್ನೊಂದು ಉಪಾಯವನ್ನು ಉಸಿರಿತು. ಅದು ಹೇಳಿದ ಎರಡನೇ ಉಪಾಯದಂತೆ ಹೆಣ್ಣು ಪಿಶಾಚಿ

ರಾತ್ರಿಯಲ್ಲಿ ಆ ಮನೆಯ ಮಾಡಿನಲ್ಲಿರುವ ಹೆಂಚುಗಳನ್ನು ತೆಗೆದು ತೆಗೆದು ಕೆಳಗೆ ಬಿಸುಡ ತೊಡಗಿತು. ಆದರ ಶಬ್ದಕ್ಕೆ ನಿದ್ದೆಯಿಂದ ಎಚ್ಚೆತ್ತ ಮಾಸ್ತರು ಮೆಲ್ಲನೆ ಹೊರಗೆ ಬಂದು, "ಹೆಂಚುಗಳನ್ನು ಕಿತ್ತು ಬಿಸುಡುವುದು ಯಾರದು ?" ಎಂದು ಕೇಳಿದರು.

"ನಾನೇ ! ನಿನ್ನೆ ಬಂದ ಪಿಶಾಚಿನಿಯೇ ! ಹೀಗೇನಾದರೂ ಮಾಡದೇ ಹೋದರೆ ನನಗೆ ಹೊತ್ತೇ ಹೋಗದು !" ಎಂದು ಹೇಳಿ ಹೆಣ್ಣು ಪಿಶಾಚಿ ಆಚೆಗೂ ಈಚೆಗೂ ಸುಳಿದು, ಗಾಳಿಯಲ್ಲಿ ಲಾಗ ಹೊಡೆದು ತೋರಿಸಿತು, ಕಿಲಿಕಿಲಿ ನಕ್ಕಿತು,

"ಸರಿಸರಿ. ನಿನ್ನ ಈ ಆಟಗೀಟ ಎಲ್ಲಾ ನಿಲ್ಲಿಸು. ಸುಮ್ಮನೆ ಸಮಯ ಹಾಳು. ಮೊದಲು ಮುಟ್ಟಿದ ಕೆಲಸ ಮಾಡಿ ಮುಗಿಸು. ನನಗೀಗ ಸ್ವಲ್ಪ ಸಂಪಾದನೆಯಾಗುತ್ತಿದೆ. ಈ ಹಾಳು ಹೆಂಚುಗಳನ್ನೆಲ್ಲ ತೆಗೆದು ಹಾಕಿ, ಗಚ್ಚಿನ ಮಾಳಿಗೆ ಕಟ್ಟಿಸಬೇಕೆಂದಿದ್ದೇನೆ. ಬೆಳಗಾಗುವುದರೊಳಗೆ ಎಲ್ಲಾ ಹೆಂಚುಗಳನ್ನೂ ತೆಗೆದು ಹಾಕಿಬಿಡಬೇಕು, ತಿಳೀತೇ?" ಎಂದು ಹೇಳಿ ಮಾಸ್ತರು ಮನೆಯ ಹೊರಗಿದ್ದ ಮರದಕೆಳಗೆ ಮಲಗಿದರು.

"ಅರೆ ! ಈತ ನನ್ನನ್ನು ಕೂಲಿಯಾಳಿನ ಲೆಕ್ಕದಲ್ಲಿ ನೋಡುತ್ತಾನಲ್ಲ ! ಎಂಥ ಅವಮಾನ !" ಎಂದುಕೊಂಡು ಹೆಣ್ಣು ಪಿಶಾಚಿ ಗೂಗೆಯ ರೂಪವನ್ನು ತಾಳಿ ಕಿರಿಚುತ್ತಾ ಬಾವಿಯ ಬಳಿಗೆ ಹಾರಿಹೋಯಿತು.

ವೃದ್ಧ ಪಿಶಾಚಿ ಅದನ್ನು ನೋಡಿ, "ಏನೇ ? ಒಳ್ಳೇ ಉತ್ಸಾಹದಲ್ಲಿರುವ ಹಾಗಿದೆ. ಸಂಗೀತ ಮಾಸ್ತರನ್ನು ಓಡಿಸಿಬಿಟ್ಟೆಯಷ್ಟೆ?" ಎಂದು ಕೇಳಿತು.

"ಆ ಉಪಾಯ ನನ್ನ ಮೇಲೇ ತಿರುಗಿತು ! ನನ್ನನ್ನೇ ಅವನು ಓಡಿಸುವ ಹಾಗೆ ಮಾಡಿಬಿಟ್ಟ. ನೀನು ಹೇಳಿಕೊಟ್ಟ ಉಪಾಯಗಳೊಂದೂ ಅವನ ಮುಂದೆ ನಿಲ್ಲುವಂಥದಲ್ಲ. ಇನ್ನೇನು ಮಾಡುವುದಪ್ಪಾ !" ಎಂದಿತು ಹೆಣ್ಣು ಪಿಶಾಚಿ ಚಿಂತೆಯಿಂದ.

ತಾನು ಹೇಳಿಕೊಟ್ಟ ಎರಡು ಉಪಾಯಗಳೂ ವ್ಯರ್ಥವಾದುದನ್ನು ತಿಳಿದು ವೃದ್ಧ ಪಿಶಾಚಿಗೆ ಅವಮಾನವೆನಿಸಿತು. "ಈಸಾರಿ ಅವನು ಓಡದಿದ್ದರೆ ನನ್ನ ಕೇಳು." ಎಂದು ಪಂಥ ಹಾಕಿ ಮೂರನೇ



ಉಪಾಯವೊಂದು ಹೇಳಿಕೊಟ್ಟಿತು. ಆ ಪ್ರಕಾರ ಹೆಣ್ಣು ಪಿಶಾಚಿ ಮರುದಿನರಾತ್ರಿ ನಿದ್ದೆ ಮಾಡಿಕೊಂಡಿದ್ದ ಸಂಗೀತ ಮಾಸ್ತರನ್ನು ಬೆನ್ನು ತಟ್ಟಿ ಎಬ್ಬಿಸಿತು. "ಮತ್ತೆ ಬಂದೆಯಾ? ಅರ್ಧಂಬರ್ಧದಲ್ಲೇ ಹೋದವಳು, ಈಗ ಬಂದು ನನ್ನನ್ನೇಕೆ ತಟ್ಟಿ ಎಬ್ಬಿಸಿದಿ? ಬಂಗಾರದಂತಹ ನನ್ನ ಸಕ್ಕರೆ ನಿದ್ದೆಗೆ ಖಾರ ತಂದೆಯಲ್ಲ?" ಎಂದು ರೇಗಿದರು ಮಾಸ್ತರು.

"ಸುಮ್ಮನೆ ಹರಟಬೇಡ. ನೀನು ಮರ್ಯಾದೆಯಲ್ಲಿ ನನ್ನ ಮನೆಬಿಟ್ಟು ಹೋಗಿಬಿಡು. ಈ ಪ್ರಾಂತವೆಲ್ಲಾ ನನ್ನದು. ಎಷ್ಟೋ ವರ್ಷಗಳಿಂದ ನಾನಿಲ್ಲಿ ಪ್ರಶಾಂತವಾಗಿ ಇರುತ್ತಿದ್ದೇನೆ. ನೀನು ಬಂದು ನಿನ್ನ ಕರ್ಣಕಠೋರವಾದ ಸಂಗೀತದಿಂದ ನನ್ನ ನೆಮ್ಮದಿಯನ್ನು ಭಂಗಮಾಡಿರುವಿ. ಹೋಗಿಬಿಡಯ್ಯ!" ಎಂದು ನೇರಾಗಿಯೇ ಹೇಳಿತು ಹೆಣ್ಣು ಪಿಶಾಚಿ.

"ಓಹೊ! ಬೆಕ್ಕಿನ ಹಾಗಿದ್ದು ಈಗ ಹುಲೀ ಹಾಗೆ ಹೆದರಿಸಿಬಿಡುತ್ತೇನೆಂದುಕೊಂಡೆಯಾ? ಒಬ್ಬರನ್ನು ಮನೆ ಹೊರಡಿಸುವುದು ಅಷ್ಟು ಸುಲಭವೇನಲ್ಲ! ಬಾಡಿಗೆಗೊಂದು ಮನೆ ಸಿಕ್ಕದೆ ನಾನು ಮಿಡುಕಿಕೊಂಡಿರುವಾಗ ಈ ಮನೆ ಸಿಕ್ಕಿದೆ. ನಾನು ಬರುವವರೆಗೆ ಸುಮ್ಮನಿದ್ದು ಈಗ ಹೋಗು ಅಂದರೆ ಹೋಗುತ್ತೇನೇನು? ನನ್ನ ಅದೃಷ್ಟದಿಂದ ಬಾಡಿಗೇನೇ ಇಲ್ಲದ ಇಂಥಾ ಮನೆ ಸಿಕ್ಕಿದೆ. ಶಿಷ್ಯರೂ ತುಂಬಾ ಸೇರಿದ್ದಾರೆ. ಆದ್ದರಿಂದ ನಾನು ಇಲ್ಲಿಂದ ಹೋಗುವ ಪ್ರಶ್ನೆನೇ ಇಲ್ಲ. ನೀನೇ ಇಲ್ಲಿಂದ ಇನ್ನೆಲ್ಲಿಗಾದರೂ ಹೋಗಿಬಿಡು." ಎಂದು ಹೇಳಿ ಅತ್ತ ತಿರುಗಿ ಮಲಗಿದರು ಮಾಸ್ತರು.

ಹೆಣ್ಣು ಪಿಶಾಚಿಯ ಮುಖ ಕಾಸಿನಷ್ಟು ಸಣ್ಣದಾಯಿತು. ಹಾಯಾಗಿ ಕುಳಿತು ಸಲಹೆ ಹೇಳುವುದು ಸುಲಭ. ಅವರವರ ಸಮಸ್ಯೆಯನ್ನು ಅವರವರೇ ಸ್ವಂತ ಬುದ್ಧಿಯಿಂದ ಪರಿಷ್ಕರಿಸಿಕೊಳ್ಳುವುದರಷ್ಟು ಒಳ್ಳೆಯದು ಯಾವುದೂ ಇಲ್ಲ.

ಮೂರನೇದಿನವಿಡೀ ಆಲೋಚನೆ ಮಾಡಿ ಆ ಹೆಣ್ಣು ಪಿಶಾಚಿ ಸಂಗೀತ ಮಾಸ್ತರೊಂದಿಗೆ, "ನಾಳೆ ರಾತ್ರಿಯಿಂದ ನನಗೂ ಸಂಗೀತ ಕಲಿಸಿಕೊಡು. ಅದಕ್ಕೆ ನೀನು ಒಪ್ಪದೇ ಹೋದರೆ ನಾನು ನಾಳೆ ಬೆಳಗ್ಗೆ ನಿನ್ನ ಶಿಷ್ಯರೊಂದಿಗೆ ಕುಳಿತು ಸಂಗೀತ ಸಾಧನೆ ಮಾಡುತ್ತೇನೆ. ನನ್ನ ಸ್ನೇಹಿತ ಪಿಶಾಚಿನಿಯರನ್ನೂ ಕರೆದು ತರುತ್ತೇನೆ" ಎಂದಿತು.

ಸಂಗೀತ ಮಾಸ್ತರಿಗೆ ಭಯವಾಯಿತು. ಈಗ ತಾನೇ ಅವರಿಗೆ ಸ್ವಲ್ಪ ಹೆಸರೂ ಹಣವೂ ಬರಲಿಕ್ಕೆ ಹತ್ತಿದೆ. ಪಿಶಾಚಿಗಳಿಗೆ ಸಂಗೀತ ಕಲಿಸುವಂತೆ ಗೊತ್ತಾದರೆ ಶಿಷ್ಯರೇ ಬಾರರು. ಊರಿನವರೂ ಹೆದರುವರು.

ಆದುದರಿಂದ ಸಂಗೀತ ಮಾಸ್ತರು ಆ ದಿನ ರಾತ್ರಿಯೇ ಮೂಟೆ ಕಟ್ಟಿಕೊಂಡು ಹೋಗಿಬಿಟ್ಟರು.





# ಮೂರ್ಖಹರ

ಒಂದಾನೊಂದು ಗ್ರಾಮದಲ್ಲಿ ಒಬ್ಬ ರೈತನಿದ್ದ. ಅವನ ಹೆಸರು ರಾಮು. ಅವನು ತನಗಿರುವ ಎರಡು ಎಕರೆ ಹೊಲದಲ್ಲಿ ಜೋಳವನ್ನು ಬೆಳೆಸಿದ. ಪೈರು ಚೆನ್ನಾಗಿ ಬೆಳೆದು, ದೊಡ್ಡ ದೊಡ್ಡ ಕದಿರುಗಳನ್ನು ಬಿಟ್ಟು, ಕೊಯ್ಲಿಗೆ ಬರುವ ಸಮಯದಲ್ಲಿ ಸೋಮಯ್ಯನೆಂಬವನ ಪಶುಗಳು ದಾಳಿಯಿಟ್ಟುವು. ಆದರಿಂದ ಪೈರು ಪೂರಾ ನಾಶವಾಗಿ ಹೋಯಿತು. ಇದನ್ನು ನೋಡಿ ರಾಮನು ತಗಾದೆ ತೆಗೆದು, ಸೋಮಯ್ಯ ತನಗೆ ಸಾವಿರ ರೂಪಾಯಿ ನಷ್ಟ ಪರಿಹಾರದ ಲೆಕ್ಕದಲ್ಲಿ ಕೊಡಬೇಕೆಂದು ಕೇಳಿದನು. ಸೋಮಯ್ಯ ಒಪ್ಪಲಿಲ್ಲ.

ರಾಮನು ಊರೊಳಗಿನ ದೊಡ್ಡ ಮನುಷ್ಯರ ಹತ್ತಿರ ಈ ತಗಾದೆಯನ್ನು ತೀರಿಸಬೇಕೆಂದು ಕೇಳಿಕೊಂಡನು. ಅಂತೆಯೇ ಹಿರಿಯರು ಎಲ್ಲಾ ಕೇಳಿ ತಿಳಿದು, ರಾಮನು ತನ್ನ ಹೊಲಕ್ಕೆ ಬೇಲಿ ಹಾಕಿ ಬಂದೋಬಸ್ತು ಮಾಡದೆ, ಕನಿಷ್ಠ ಪಕ್ಷ ಕಾವಲು ಕೂಡಾ ಇಡದೆ ಅಲಕ್ಷ್ಯವಾಗಿದ್ದುದು ತಪ್ಪೆಂದು ಹೇಳಿದರು. ಆದರೂ ಸೋಮಯ್ಯನು ರಾಮನಿಗೆ ಅರ್ಧ ಪರಿಹಾರ ಅಂದರೆ ಐನೂರು ರೂಪಾಯಿ ಕೊಡಬೇಕೆಂತಲೂ ತೀರ್ಮಾನಿಸಿ ತೀರ್ಪು ಹೇಳಿದರು. ಇದು ಸೋಮಯ್ಯನಿಗೆ ಹಿಡಿಸಲಿಲ್ಲ. ಆ ಊರಿನ ಪಟೇಲರು ಲಂಚಕ್ಕೆ ಬಾಗುವವರೆಂದು ಅವನಿಗೆ ಗೊತ್ತಿತ್ತು. ಅವರು ಹೇಳುವ ತೀರ್ಪಿಗೆ ತಾನು ಒಪ್ಪುವೆನೆಂದು ರಾಮನಿಗೆ ಹೇಳಿ ಸೋಮಯ್ಯ ಪಟೇಲರ ಬಳಿಗೆ ಹೋಗಿ, ತನಗೆ ಅನುಕೂಲವಾಗಿ ತೀರ್ಪು ಹೇಳಿದರೆ ತಾನು ಇನ್ನೂರು ರೂಪಾಯಿ ಅವರಿಗೆ ಕೊಡುವುದಾಗಿ ಹೇಳಿದ. ಆದರಂತೆಯೇ ಆ ಪಟೇಲರು ಸೋಮಯ್ಯನಿಂದ ಲಂಚ ಪಡೆದು, "ರಾಮನು ತನ್ನ ಹೊಲಕ್ಕೆ ತಕ್ಕ ಬಂದೋಬಸ್ತು ಮಾಡದ್ದರಿಂದ, ಪೂರಾ ತಪ್ಪು ಅವನದೇ. ಅವನೇನೂ ಪರಿಹಾರ ಕೊಡಬೇಕಾಗಿಲ್ಲ" ಎಂದು ತೀರ್ಪು ಹೇಳಿ ಮುಗಿಸಿಬಿಟ್ಟರು.

ರಾಮನು ಈ ತೀರ್ಪನ್ನು ಅಮೋದಿಸಲಿಲ್ಲ. ಅವನು ನೆಟ್ಟಗೆ ತಾಲೂಕು ಅಧಿಕಾರಿಯ ಬಳಿಗೆ ಹೋಗಿ ಫಿರ್ಯಾದಿ ಮಾಡಿದನು. ಆ ಅಧಿಕಾರಿ ಕೂಡಾ ಲಂಚಪ್ರಿಯನಾದವನೇ. ರಾಮನು ಅವನಿಗೆ ಇನ್ನೂರ ಐವತ್ತು ರೂಪಾಯಿ ಲಂಚ ಕೊಟ್ಟು ತನಗೆ ಅನುಕೂಲವಾಗುವಂತೆ ತೀರ್ಪು ಮಾಡಿಸಿಕೊಂಡನು.

ಕೆ. ಕೃಷ್ಣ ಅಯ್ಯರ್

ಆ ತೀರ್ಪು ಹೀಗಿತ್ತು: "ಊರೊಳಗಿರುವ ಎಲ್ಲಾ ಹೊಲಗಳಿಗೂ ಬೇಲಿ ಕಟ್ಟಬೇಕೆಂದು ಶಾಸನವೇನಿಲ್ಲ. ರಾಮನಿಗೆ ಉಂಟಾದ ನಷ್ಟಕ್ಕೆ ಪೂರ್ತಿಯಾಗಿ ಸೋಮಯ್ಯನೇ ಬಾಧ್ಯನು. ಅವನು ರಾಮನಿಗೆ ಸಾವಿರ ರೂಪಾಯಿ ನಷ್ಟ ಪರಿಹಾರ ಕೊಡತಕ್ಕದ್ದು."

ಇದನ್ನು ಒಪ್ಪದೇ ಸೋಮಯ್ಯ ಜಿಲ್ಲಾಧಿಕಾರಿಯ ಬಳಿಗೆ ಹೋಗಿ ದೂರಿಕೊಂಡ. ಅವನು ಕೂಡಾ ಲಂಚದ ರುಚಿಗೆ ನಾಲಗೆಯಾಡಿಸುವವನೇ. "ತಾಲೂಕು ಅಧಿಕಾರಿ, ನೀನು ರಾಮಯ್ಯನಿಗೆ ಸಾವಿರ ರೂಪಾಯಿ ಪರಿಹಾರ ಕೊಡಬೇಕೆಂದನಲ್ಲವೇ ? ಅದರಲ್ಲಿ ಅರ್ಧ ಭಾಗ ನನಗೆ ಕೊಟ್ಟರೆ ನಿನಗೆ ಅನುಕೂಲವಾಗಿ ತೀರ್ಪು ಕೊಡಬಹುದು" ಎಂದನು.

ಐನೂರು ರೂಪಾಯಿ ಲಂಚ ಕೊಟ್ಟರೂ ತನಗೆ ಇನ್ನೂರೈವತ್ತು ರೂಪಾಯಿ ಲಾಭವೇ ಇದೆಯೆಂದು ಲೆಕ್ಕ ಹಾಕಿಕೊಂಡು ಸೋಮಯ್ಯ ಜಿಲ್ಲಾ ಅಧಿಕಾರಿಗೆ ಐನೂರು ರೂಪಾಯಿ ಕೊಟ್ಟುಬಿಟ್ಟನು. ತಾಲೂಕು ಅಧಿಕಾರಿಯ ತೀರ್ಪು ಸರಿಯಲ್ಲವೆಂದೂ ಪಟೇಲರ ತೀರ್ಪೇ ಸರಿಯಾದುದೆಂದೂ ಜಿಲ್ಲಾ ಅಧಿಕಾರಿ ತೀರ್ಮಾನಿಸಿಬಿಟ್ಟನು.

ರಾಮನಿಗೆ ಅದನ್ನು ನೋಡಿ ತುಂಬಾ ರೋಷ ಬಂದಿತು. ಅವನು ಮಂಡಲಾಧಿಕಾರಿಯ ಬಳಿಗೆ ಹೋಗಿ ಆ ಅಧಿಕಾರಿ ಕೇಳಿದಂತೆ ಐನೂರು ರೂಪಾಯಿ ಲಂಚ ಕೊಟ್ಟು ತನಗೆ ಅನುಕೂಲವಾಗುವಂತೆ ತೀರ್ಪು ಮಾಡಿಸಿ ಕೊಂಡುಬಂದನು.

ಈ ತೀರ್ಪನ್ನು ಊರ್ಜಿತ ಮಾಡಿಸಬೇಕಾದವನು ರಾಜ್ಯಾಧಿಕಾರಿ. ಅವನು ನೀತಿ ಪರಾಯಣನೂ ನ್ಯಾಯಬುದ್ಧಿಯುಳ್ಳವನೂ ಆದುದರಿಂದ ಈ ತಗಾದೆಯ ಪೂರ್ವಾಪರಗಳೆಲ್ಲವನ್ನೂ ಪರ್ಯಾಲೋಚಿಸಿದನು. ಮೊದಲು ಗ್ರಾಮದ ಹಿರಿಯರು ಕೊಟ್ಟ ತೀರ್ಪೇ ನ್ಯಾಯವಾದುದೆಂದು ಅವನಿಗೆ ತೋರಿತು. ಅದರಂತೆ ಸೋಮಯ್ಯ ರಾಮನಿಗೆ ಐನೂರು ರೂಪಾಯಿಗಳನ್ನು ನಷ್ಟಪರಿಹಾರಕೊಡಬೇಕೆಂದು ತೀರ್ಪು ಹೇಳಿದನು. ಅದರಂತೆ ಸೋಮಯ್ಯ ಕೊಡಲೇ ಬೇಕಾಯಿತು.

ರಾಮನೂ ಸೋಮಯ್ಯನೂ ಮನೆಗೆ ಬಂದ ಮೇಲೆ, ತಾವು ಗ್ರಾಮದ ಹಿರಿಯರ ತೀರ್ಪನ್ನು ಒಪ್ಪದೇ ಹೋದುದರಿಂದ ಉಂಟಾದ ನಷ್ಟವೆಷ್ಟೆಂಬುದನ್ನು ಲೆಕ್ಕಹಾಕ ತೊಡಗಿದರು. ಒಬ್ಬೊಬ್ಬರಿಗೂ ಏಳುನೂರ ಐವತ್ತು ರೂಪಾಯಿ ನಷ್ಟವಾಗಿತ್ತೆಂದು ಗೊತ್ತಾಯಿತು. ಅದರ ಮೇಲೆ ಎಷ್ಟೋ ಶ್ರಮ ಕೂಡಾ ಪಟ್ಟಿದ್ದಾರೆ.

ಅದಕ್ಕೆ ಕಾರಣ ಅವರ ಮೂರ್ಖ ಹಠ ಮತ್ತು ಲಂಚಕೋರರ ಆಶ್ರಯವೆಂಬ ಗುಟ್ಟು ಅವರಿಗೆ ತಿಳಿಯಿತೋ ಇಲ್ಲವೋ, ನಮಗಂತೂ ತಿಳಿಯಿತು.



# ಭೂತದಯೆ

ಒಬ್ಬ ರಾಜನಿಗೆ ಜನ್ಮದಿನೋತ್ಸವ ನಡೆಯುತ್ತಿದ್ದಿತು. ಸಾಮಂತರನೇಕರು ಬೆಲೆಬಾಳುವ ಕಾಣಿಕೆಗಳನ್ನು ರಾಜನಿಗೆ ಸಮರ್ಪಿಸಿಕೊಂಡಿದ್ದರು.

ಹಾಗೆಯೇ ಬೇಟೆಗಾರನೊಬ್ಬ ಒಂದು ಎರಳೆಯನ್ನು ರಾಜನಿಗೆ ಕಾಣಿಕೆಯಾಗಿ ಕೊಟ್ಟ. ರಾಜನು ಸಂತೋಷಪಟ್ಟು ಅವನಿಗೆ ಗಂಟು ತುಂಬ ಚಿನ್ನವನ್ನು ಕೊಟ್ಟು ಕಳುಹಿಸಿದ.

ಅದನ್ನು ನೋಡಿ ಮಂತ್ರಿ, "ನೀವು ಆ ಬೇಟೆಗಾರನಿಗೆ ಕೊಟ್ಟ ಬಹುಮಾನವು ತುಂಬ ಹೆಚ್ಚಾಯಿತೇನೋ ?" ಎಂದನು.

"ಸರಿಯಾಗೇ ಇದೆ. ಸ್ವೇಚ್ಛೆಯಾಗಿ ವಿಹರಿಸುವ ಸಾಧುಪ್ರಾಣಿಗಳಿಗೆ ಮತ್ತೆ ಸ್ವೇಚ್ಛೆ ಕೊಡುವ ಅವಕಾಶವು ನನಗೆ ದಿನಾ ಬರುತ್ತದೇನು ?" ಎಂದು ರಾಜನು ಕೇಳಿದನು.

"ಮಹಾರಾಜರೇ, ನೀವು ಒಂದು ವಿಷಯ ಗಮನಿಸಬೇಕು. ಬಂದಿಯಾದ ಸಾಧುಪ್ರಾಣಿಗಳನ್ನು ನೀವು ಬಹುಮಾನ ಕೊಟ್ಟು ಬಿಡುಗಡೆ ಮಾಡುವಿರೆಂದು ತಿಳಿದರೆ, ಅಂತಹ ಪ್ರಾಣಿಗಳನ್ನು ಹಿಡಿದು ನಿಮಗೆ ಕೊಡಲು ಅನೇಕ ಮಂದಿ ಪ್ರಯತ್ನಿಸುತ್ತಾರೆ. ಕೆಲವಕ್ಕೆ ಪ್ರಾಣಹಾನಿಯೂ ಆಗಬಹುದು. ನೀವು ಭೂತದಯೆ ತೋರಿಸಬೇಕಾದರೆ ಯಾರೂ ಸಾಧುಪ್ರಾಣಿಗಳನ್ನು ಹಿಡಿಯಬಾರದೆಂದು ಶಾಸನ ಮಾಡಿರಿ. ಅಷ್ಟೇ ಹೊರತು ಹಿಂಸಿಸಿ ಹಿಡಿದ ಪ್ರಾಣಿಗಳನ್ನು ಬಿಡುಗಡೆ ಮಾಡಿದ ಮಾತ್ರಕ್ಕೆ ಕರುಣೆ ತೋರಿಸಿದಂತಾಗದು. ಅದು ಇನ್ನಷ್ಟು ಕೆಡುಕಿಗೇ ಹೋಗುವಂತಹುದು." ಎಂದ ಮಂತ್ರಿ.

ರಾಜನು ನಾಚಿಕೊಂಡು ಮಂತ್ರಿ ಹೇಳಿದ ಹಾಗೆಯೇ ಶಾಸನ ಮಾಡಿದನು.





# ಮಾಯಾಫಕೀರ

ಹಿಂದೆ ಕಾಕತೀಯರಿಂದ ಪ್ರಸಿದ್ಧವಾದ ಓರುಗಲ್ಲು ರಾಜ್ಯವು ಪತನವಾದ ಮೇಲೆ ಕಾಕತೀಯ ಸಾಮ್ರಾಜ್ಯವೇ ಅಸ್ತಮಿಸಿದಂತಾಯಿತು. ಕಾಕತೀಯರ ಚಕ್ರವರ್ತಿಯಾಗಿದ್ದ ಪ್ರತಾಪರುದ್ರನ ಕೋಶಾಧಿಕಾರಿಗಳಾಗಿದ್ದ ಹರಿಹರ ಬುಕ್ಕರಾಯರೆಂಬ ಇಬ್ಬರು ಅಣ್ಣತಮ್ಮಂದಿರು ಅನಾಥರಂತಾದರು. ಅವರು ದಕ್ಷಿಣಕ್ಕೆ ಹೊರಟು ತುಂಗಭದ್ರಾನದೀ ಪ್ರಾಂತಕ್ಕೆ ಬಂದರು. ಅಲ್ಲಿ ಅವರಿಗೆ ಯೋಗವು ಕೂಡಿಬಂದು ವಿಜಯನಗರವೆಂಬ ರಾಜ್ಯವನ್ನು ನಿರ್ಮಿಸಿಕೊಂಡರು. ಮೊದಲನೆಯ ರಾಜನಾಗಿ ಹರಿಹರನಿದ್ದು, ಅವನ ತರುವಾಯ ಬುಕ್ಕರಾಯನು ರಾಜನಾಗಿ ಪಾಲಿಸತೊಡಗಿದನು. ಅವನು ಪ್ರಜೆಗಳಲ್ಲಿದ್ದ ವಿಷಮತೆಗಳನ್ನೂ, ಮತದ್ವೇಷಗಳನ್ನೂ ತೊಲಗಿಸಿ, ಒಳ್ಳೆಯ ವ್ಯವಸ್ಥೆಯಿಂದ ಪರಿಪಾಲನೆ ಮಾಡತೊಡಗಿದನು. ಮಹಮ್ಮದೀಯರ ಕಾಠಿಣ್ಯದ ಪರಿಪಾಲನೆಯನ್ನು ತಾಳಲಾಗದೆ ವಲಸೆಬಂದ ಹಿಂದುಗಳಿಗೆ ವಿಜಯನಗರವು ಸುಖಾಶ್ರಯವೆನಿಸುತಿತ್ತು. ಆದರೆ ಬುಕ್ಕರಾಯನು ಯಾವ ಮತವನ್ನೂ ದೂಷಿಸುವವನಲ್ಲ; ದೂಷಿಸಿದರೆ ಸಹಿಸುವವನೂ ಅಲ್ಲ.

ಓರುಗಲ್ಲಿನಿಂದ ಪ್ರಜೆಗಳು ಬಹಿರಂಗವಾಗಿ ಹೊರಟುಹೋಗುವುದಾದರೆ ತಮ್ಮೊಂದಿಗೆ ಒಂದು ಕರಿಮಣಿಯನ್ನು ಕೂಡಾ ತೆಗೆದುಕೊಂಡು ಹೋಗಕೂಡದೆಂಬ ಕಟ್ಟುನಿಟ್ಟು ಬಲವಾಗಿತ್ತು. ಸಮಸ್ತ ಸೊತ್ತನ್ನೂ ಸರಕಾರದವಶಕ್ಕೆ ಬಿಟ್ಟುಕೊಟ್ಟು ಹೊರಟು ಹೋಗಬೇಕಿತ್ತು. ತಮ್ಮೊಂದಿಗೆ ಹಣವೋ, ದವಸಗಳನ್ನೋ ಕೊಂಡೊಯ್ಯಬೇಕಾದವರು, ಜತೆಗೆ ಎಷ್ಟೋ ಜನರನ್ನು ಸೇರಿಸಿಕೊಂಡು ಗುಟ್ಟಾಗಿ ಹೋಗಬೇಕು.

ಆದರೆ ಮಹಮ್ಮದೀಯರಿಗೆ ಈ ಬಗೆಯ ಕಷ್ಟಗಳೇನಿಲ್ಲ. ಅವರು ಎಲ್ಲಿಗೆ ಬೇಕಾದರೂ ಸ್ವೇಚ್ಛೆಯಾಗಿ ಹೋಗಬಹುದು, ಬರಬಹುದು.

ಓರುಗಲ್ಲಿನಲ್ಲಿ ಮುತ್ಯಾಲನೆಂಬ ಹಿಂದೂ ಸಾವುಕಾರನೊಬ್ಬನಿದ್ದ. ಕುಳಿತರೆ ನಿಂತರೆ ಅಧಿಕಾರಿಗಳಿಗೆ ನಜರಾಣೆ ಸಲ್ಲಿಸಲಾಗದೆ, ಅವನು ವಿಜಯನಗರಕ್ಕೆ ಹೊರಟುಹೋಗಬೇಕೆಂದುಕೊಂಡನು. ಬಹಿರಂಗವಾಗಿ ಹೋಗಬೇಕಾದರೆ ಅವನು ಉಟ್ಟಬಟ್ಟೆಯೊಂದಿಗೆ ಕೈಬೀಸಿಕೊಂಡು ಹೋಗಬೇಕು. ಅದಕ್ಕಾಗಿ ಅವನು ಒಬ್ಬ ಫಕೀರನ ಸ್ನೇಹ ಮಾಡಿಕೊಂಡ.

ಆರ್. ಎಸ್. ಶರ್ಮ

ಆ ಫಕೀರ ಬಹಳ ಒಳ್ಳೆಯವನೆಂದು ಪ್ರತೀತಿ. ಅವನಿಗೊಂದು ಒಂಟೆಯೂ ಇದ್ದಿತು. ಅವನು ಮಕ್ಕಾ ಮದೀನಾ ಮೊದಲಾದ ಪುಣ್ಯಕ್ಷೇತ್ರಗಳಿಗೆ ಒಂಟೆಯ ಮೇಲೆ ಕುಳಿತು ಪ್ರಯಾಣ ಮಾಡುತ್ತಿದ್ದ. ಫಕೀರ ನೆಂದೇ ಅವನಿಗೆ ಹೆಸರಾಗಿಬಿಟ್ಟಿತ್ತು. ಆ ಹೆಸರಿನಿಂದ ಕರೆದರೆ ಅವನು ಗಡ್ಡ ನೀವಿಕೊಳ್ಳುತ್ತಾ ನೋಡಿ ಮಾತಾಡುವನು. ಈ ಫಕೀರ ಮುತ್ಯಾಲನಿಗೆ ಸಹಾಯ ಮಾಡಲು ಒಪ್ಪಿಕೊಂಡನು. ಮುತ್ಯಾಲನ ಆಸ್ತಿ ಸರ್ವಸ್ವವಾಗಿ ಒಂದು ಮಣ ಚಿನ್ನ ಮತ್ತು ಕೆಲವು ರತ್ನಗಳನ್ನು ವಿಜಯನಗರಕ್ಕೆ ಸೇರಿಸಿಬಿಟ್ಟರೆ, ಫಕೀರ ನಿಗೆ ಒಂದು ಲಕ್ಷ ರೂಪಾಯಿ ಕೊಡುವುದಾಗಿ ಮುತ್ಯಾಲ ಹೇಳಿದ. ಫಕೀರನೂ ಒಪ್ಪಿದ. ಅವರ ಏರ್ಪಾಡಿನಂತೆ ಫಕೀರನು ಅತಿರಹಸ್ಯವಾಗಿ ವಿಜಯ ನಗರವನ್ನು ಸೇರಬೇಕು. ಅವನು ಹೊರಟ ಹದಿನೈದು ದಿನಗಳ ಮೇಲೆ ಮುತ್ಯಾಲ ಉಟ್ಟಬಟ್ಟೆಯಲ್ಲಿ ಹೊರಟು ವಿಜಯನಗರ ತಲುಪುತ್ತಾನೆ. ಆಗ ಫಕೀರನು ಮುತ್ಯಾಲನನ್ನು ವಿಜಯನಗರದ ಮಸೀದಿ ಯಲ್ಲಿ ಸಂಧಿಸುತ್ತಾನೆ.

ಈ ಏರ್ಪಾಡಿನಂತೆ ಫಕೀರ ಹೊರಟ ಹದಿನೈದು ದಿನಗಳಲ್ಲಿ ಮುತ್ಯಾಲನೂ ಹೊರಟು ವಿಜಯನಗರ ತಲಪಿ, ಮಸೀದಿಗಳಲ್ಲಿ ಫಕೀರನನ್ನು ಹುಡುಕ ತೊಡಗಿದ. ಯಾವುದಾದರೂ ಮಸೀದಿ ಹತ್ತಿರ ಇರುವುದಾಗಿ ಹೇಳಿದ್ದ ಫಕೀರ ಯಾವ ಮಸೀದಿ ಗಳಲ್ಲಿಯೂ ಕಾಣಸಿಗಲಿಲ್ಲ. ಛತ್ರ ಚಾವಡಿಗಳಲ್ಲೂ ಫಕೀರ ಸಿಗಲಿಲ್ಲ.

ನಡೆದ ಸಂಗತಿ ಏನಂದರೆ, ಅಷ್ಟೊಂದು ಧನವನ್ನು ನೋಡಿದ ಕೂಡಲೇ ಫಕೀರನಿಗೆ ಅದನ್ನು ಅಪಹರಿಸ ಬೇಕೆಂಬ ಬುದ್ಧಿ ಬಂದಿತ್ತು. ವಿಜಯನಗರ ತಲುಪಿದ ಕೂಡಲೇ ಅವನು ಗಡ್ಡವನ್ನು ತೆಗೆಯಿಸಿ, ಹಿಂದೂ ವರ್ತಕನ ವೇಷದಲ್ಲಿ ಮುತ್ಯಾಲನ ಸೊತ್ತನ್ನೆಲ್ಲಾ ಮಾರಿ ಬಿಟ್ಟ. ಅವನು ವಿಜಯನಗರದ ಬೀದಿಯಲ್ಲಿ ಒಳ್ಳೇ



ಠೀವಿಯಿಂದ ತಿರುಗುತ್ತ, ಒಂದು ದಿನ ಮುತ್ಯಾಲನಿಗೇ ಇದಿರಾದ. ಮುತ್ಯಾಲನಿಗೆ ಅವನ ಗುರುತು ಹತ್ತದೆ, "ಅಯ್ಯಾ, ಓರುಗಲ್ಲಿನಿಂದ ಎರಡು ವಾರಗಳ ಕೆಳಗೆ ಒಂಟೆಯ ಮೇಲೆ ಬಂದ ಫಕೀರನನ್ನು ನೋಡಿದಿರಾ?" ಎಂದು ಕೇಳಿದ.

"ನೋಡಿದೆನಲ್ಲಾ? ಅವನಿಗೆ ಮೊಳದುದ್ದ ಗಡ್ಡ ವಿದ್ದಿತಲ್ಲವೆ?" ಎಂದು ಫಕೀರ ಮುತ್ಯಾಲನನ್ನು ಕೇಳಿದ. ಕೂಡಲೇ ಮುತ್ಯಾಲ ಆತುರದಿಂದ, "ಹೌದು, ಹೌದು! ಅವನೇ. ಅವನು ಎಲ್ಲಿರುವನೆಂಬ ಗುರುತು ಹೇಳಬಲ್ಲಿರಾ?" ಎಂದು ಕೇಳಿದ.

"ಆತ ನಿನ್ನೆ ಇಲ್ಲಿಯೇ ಕಣ್ಣಿಗೆ ಬಿದ್ದಿದ್ದ. ಅವನ ಹತ್ತಿರ ಚಿನ್ನವೂ ಮಣಿಗಳೂ ಇದ್ದುವು. ನನಗೆ ತೋರಿಸಿ, ಕೊಂಡುಕೊಳ್ಳುವಿರಾ ಎಂದು ಕೇಳಿದ. ನಾನು ತೆಗೆದುಕೊಳ್ಳಲಿಲ್ಲ. ಅಷ್ಟರಲ್ಲಿ ಯಾರೋ ಬಾಗ್ದಾದು ಕಡೆಯ ವರ್ತಕನೊಬ್ಬ ಬಂದ. ಇಬ್ಬರೂ ಕೂಡಿ ಮಾತನಾಡಿಕೊಂಡರು. ಅವರಿಬ್ಬರೂ

ಬಾಗ್ದಾದಿಗೆ ಹೊರಟು ಹೋಗುವರೆಂದು ಅವರ ಮಾತಿನಿಂದ ತಿಳಿಯಿತು. "ಇಷ್ಟರಲ್ಲಿ ಹೊರಟಿರಬೇಕು" ಎಂದು ತನ್ನ ಅಭ್ಯಾಸದಂತೆ ಇಲ್ಲದ ಗಡ್ಡವನ್ನು ನೀವಲು ನೋಡಿದನು.

ಆಗ ಅವನೇ ಫಕೀರನೆಂದು ಮುತ್ಯಾಲನಿಗೆ ಗೊತ್ತಾಯಿತು. "ನೀನೇ ಆ ಫಕೀರ! ನನ್ನ ಧನವನ್ನೆಲ್ಲಾ ಅಪಹರಿಸಿ ನಾಟಕವಾಡುವೆ! ಇನ್ನು ನನ್ನಿಂದ ತಪ್ಪಿಸಿಕೊಳ್ಳಲಾರೆ!" ಎಂದು ಮುತ್ಯಾಲ ಜೋರು ಮಾಡಿದನು.

"ಛೀ! ಛೀ! ನಾನಲ್ಲ, ನಾನಲ್ಲ! ಏನೇನೋ ಹೇಳುವೆ!" ಎಂದ ಫಕೀರ. ಇಬ್ಬರಿಗೂ ವಾಗ್ವಾದ ನಡೆಯಿತು. ಜನರೂ ಗುಂಪುಗೂಡಿದರು. ಮುತ್ಯಾಲ ಫಕೀರನ ಕೈಹಿಡಿದು ಬುಕ್ಕರಾಯನ ಬಳಿಗೆ ಕರೆದುಕೊಂಡು ಹೋಗಿ, ತನಗೆ ಅವನಿಂದಾದ ಅನ್ಯಾಯವನ್ನು ಕುರಿತು ಎಲ್ಲವನ್ನೂ ಹೇಳಿದ. ತನಗೆ ನ್ಯಾಯ ದೊರಕುವಂತೆ ಮಾಡಬೇಕೆಂದೂ ಕೇಳಿಕೊಂಡ.

ಬುಕ್ಕರಾಯನು ಫಕೀರನನ್ನು ನ್ಯಾಯಾಲಯಕ್ಕೆ ಕರೆಯಿಸಿದನು. ಅವನು ಫಕೀರನೊಂದಿಗೆ, "ನೀನು ನಿಜವಾದ ಫಕೀರನಾದರೆ ಮುತ್ಯಾಲನ ಸೊತ್ತನ್ನು ಅವನಿಗೆ ಕೊಟ್ಟುಬಿಡು" ಎಂದನು.

"ನಾನೆಲ್ಲಿಯ ಫಕೀರ? ನನ್ನ ಹೆಸರು ಕನಕಶೆಟ್ಟಿ. ನನಗೂ ಫಕೀರತೆಗೂ ಯಾವ ಸಂಬಂಧವೂ ಇಲ್ಲ." ಎಂದ ಫಕೀರ. "ಹಾಗಾದರೆ ಮುತ್ಯಾಲ ನಿನ್ನನ್ನು ನೋಡಿ ಫಕೀರನೆಂದು ಏಕೆ ಹೇಳುತ್ತಾನೆ?" ಎಂದು ಕೇಳಿದ ಬುಕ್ಕರಾಯ.

"ನಾನೊಬ್ಬ ವರ್ತಕ. ನನ್ನ ಹತ್ತಿರ ತುಂಬಾ ಧನವಿದೆಯೆಂದು ತಿಳಿದು ಇವನು ಈ ಉಪಾಯ ಮಾಡಿದ್ದಾನೆ. ಬೇರೇನೂ ಕಾರಣ ನನಗೆ ಗೊತ್ತಾಗುವುದಿಲ್ಲ" ಎಂದ ಫಕೀರ.

ಬುಕ್ಕರಾಯನು ಒಂದೆರಡು ಕ್ಷಣ ಆಲೋಚಿಸಿ, "ಸರಿ ಸರಿ, ಬರೀ ಸಮಯ ಹಾಳು! ಮುತ್ಯಾಲನ ಈ ಅಭಿಯೋಗ ನಡೆಯುವಂಥಾದ್ದಲ್ಲ. ಸುಳ್ಳು. ನೀನು ಹೊರಟುಹೋಗಬಹುದು" ಎಂದು ಫಕೀರನನ್ನ ನೋಡಿ ಹೇಳಿದನು.

ಫಕೀರನು ಆನಂದದಿಂದ ಉಬ್ಬಿಕೊಂಡು ಹೊರಗೆ ಹೋಗುವಾಗ, ಬುಕ್ಕರಾಯನು ಹಿಂದಿನಿಂದ, "ಆ ಫಕೀರನನ್ನು ನಿಲ್ಲುವಂತೆ ಹೇಳಿ" ಎಂದು ಗಟ್ಟಿಯಾಗಿ ಕೂಗಿ ಹೇಳಿದನು. ಕೂಡಲೇ ಫಕೀರನು ನಿಂತು ಹಿಂದಿರುಗಿ ನೋಡಿದನು. "ನೀನೇ ಫಕೀರ! ಮುತ್ಯಾಲನಿಗೆ ಅನ್ಯಾಯವೇ ನಡೆದಿದೆ!" ಎಂದು ಬುಕ್ಕರಾಯನು ಕಣ್ಣು ಕೆಂಪುಮಾಡಿ ಭಟರಿಂದ ಅವನನ್ನು ಬಂಧಿಸಿದನು. ಆಮೇಲೆ ಮುತ್ಯಾಲನಿಗೆ ಅವನ ಸೊತ್ತು ತಿರುಗಿ ಲಭಿಸಿ, ಅವನು ವಿಜಯನಗರದಲ್ಲಿ ಒಳ್ಳೆಯ ರೀತಿಯಲ್ಲಿ ಬದುಕಿರುವಂತಾಯಿತು.



# ವ್ಯತಿರೇಕ

ರಾಜನೂ ರಮಾಬಾಯಿಯೂ ಗಂಡಹೆಂಡಿರು. ರಮಾಬಾಯಿ ಏನು ಹೇಳಿದರೂ ರಾಜನು ಅದಕ್ಕೆ ವ್ಯತಿರೇಕವಾಗಿಯೇ ಮಾಡುವನು.

ಒಂದು ಸಾರಿ ರಮಾಬಾಯಿ ಬರಲಿರುವ ಹಬ್ಬಕ್ಕೆ ತಾನು ತೌರುಮನೆಗೆ ಹೋಗಿ ಬರುವೆನೆಂದು ಗಂಡನನ್ನು ಕೇಳಿದಳು. ಕೂಡಲೇ ರಾಜ "ಕೂಡದು. ನಾನೊಬ್ಬನೇ ಇರಲಾರೆ. ಬಾಯಿ ಮುಚ್ಚಿಕೊಂಡು ಮನೆಯಲ್ಲೇ ಇರಬೇಕು." ಎಂದನು.

ಆ ದಿನ ರಮಾಬಾಯಿಯ ಅಣ್ಣ ರಂಗಪ್ಪ, ಏನೋ ಕೆಲಸದ ಮೇಲೆ ಆ ಊರಿಗೆ ಬಂದಿದ್ದ. ರಮಾಬಾಯಿ ಅವನ ಹತ್ತಿರ ತನ್ನ ಗಂಡನ ವಿಷಯವನ್ನೆಲ್ಲಾ ಹೇಳಿದಳು. ಅವನು ಮರುದಿನ ಬೆಳಿಗ್ಗೆ ಹೊರಡುತ್ತ ರಾಜನೊಂದಿಗೆ, "ರಾಜ ಬಾವಯ್ಯ, ತಂಗೀನ ಹಬ್ಬಕ್ಕೆ ಬರಬೇಕೆಂದು ಕರೆದೆ. ನೀವು ಕೂಡಾ ಹೋಗು ಅಂದಿರಂತೆ; ಆದರೆ ಯಾಕೋ ಅವಳಿಗೆ ಇಷ್ಟವಿಲ್ಲ, ಬರುವುದಿಲ್ಲ ಅಂದಳು. ಯಾಕೋ ಮೊಂಡುತನ ಮಾಡುತ್ತಾಳೆ. ಅದಕ್ಕಾಗಿ ಅವಳಿಗೇನೂ ಬಯ್ಯಬೇಡಿ" ಎಂದನು.

ಕೂಡಲೇ ರಾಜ ಒಳಗೆ ಹೋಗಿ ರಮಾಬಾಯಿಯೊಂದಿಗೆ, "ತೌರುಮನೆಗೆ ಬಾ ಅಂದರೆ ಬರುವುದಿಲ್ಲ ಅಂದೆಯಂತೆ. ಏಕೆ ಹಾಗೆಂದೆ? ಕೂಡಲೇ ಹೊರಡು" ಎಂದನು.

"ಬೇಡ ಬಿಡಿ. ನಾನು ಇಲ್ಲೇ ಇರುತ್ತೇನೆ. ನೀವು ಹಟ ಹಿಡಿದರೆ ಹಬ್ಬದ ದಿನ ಬೇಕಾದರೆ ಬೆಳಿಗ್ಗೆ ಹೋಗಿ ಸಾಯಂಕಾಲ ಬಂದುಬಿಡುತ್ತೇನೆ" ಎಂದಳು ರಮಾಬಾಯಿ.

ರಾಜ ಕೋಪದಿಂದ, "ಅದೇನೂ ಬೇಡ. ನೀನು ಈಗಲೇ ಹೊರಡಬೇಕು. ಬಾಯಿ ಮುಚ್ಚಿ ತೌರಿಗೆ ಹೋಗಿ, ಹಬ್ಬ ಮುಗಿದ ಮೇಲೆಯೇ ಬರಬೇಕು. ನೋಡಿಕೋ!" ಎಂದು ಹೇಳಿ ಕುದುರೇ ಗಾಡಿ ತರಲು ಹೊರಗೆ ಹೋದ.





# ನಿಜವೋ ಸುಳ್ಳೋ?

ಪ್ರೊರೀನಗರದ ಪೀಠದಲ್ಲಿ ಸುಧೀರ ಮತ್ತು ಸುರೇಂದ್ರ ಎಂಬ ಇಬ್ಬರು ರಾಜಕುಟುಂಬದ ಯುವಕರು ಸ್ನೇಹಿತರಾಗಿದ್ದರು. ಅವರಿಬ್ಬರೂ ಅಲ್ಲಿ ತಮ್ಮ ವಿದ್ಯಾಭ್ಯಾಸವನ್ನು ಮುಗಿಸಿ ತಮ್ಮ ದೇಶಗಳಿಗೆ ಹೊರಟರು. ಅವರಿಬ್ಬರದೂ ನೆರೆಹೊರೆ ದೇಶಗಳೇ.

ದಾರಿಯಲ್ಲಿ ಅವರಿಗೊಂದು ಅರಣ್ಯವು ತಗ[illegible]ು. ಅವರು ಆ ಅರಣ್ಯದ ಮಧ್ಯದಲ್ಲಿ ನಡೆಯುವಾಗ ಅಕಸ್ಮಾತ್ತಾಗಿ ಆಕಾಶವು ಮೋಡಗಳಿಂದ ಮುಚ್ಚಿ ಮಳೆ ಸುರಿಯಲು ಶುರುವಾಯಿತು. ಅವರಿಬ್ಬರೂ ಓಡುತ್ತಾ ಆ ದೇವಾಲಯದೊಳಗೆ ಹೊಕ್ಕರು. ಆಗ ಅಲ್ಲಿ ಈ ಮೊದಲೇ ಸೇರಿಕೊಂಡಿದ್ದ ಒಬ್ಬ ಬೈರಾಗಿಯನ್ನು ನೋಡಿದರು.

ಅವರು ಅವನನ್ನು ಕುರಿತು, ಯಾರು ಏನೆಂದು ವಿಚಾರಿಸಿದರು. ಅದಕ್ಕೆ ಬೈರಾಗಿ, "ನಾನೊಬ್ಬ ಸಿದ್ಧಾಂತಿ. ದೇಶಸಂಚಾರ ಮಾಡುತ್ತ ನಿನ್ನೆಯೇ ಬಂದೆ. ನನಗೆ ಊರೊಳಗೆ ತಿರುಗಾಡಲು ಇಷ್ಟವಿಲ್ಲ. ನಾನು ದೇಶ ದೇಶಗಳನ್ನೆಲ್ಲಾ ತಿರುಗಿದ್ದೇನೆ. ಜ್ಯೋತಿಷ್ಯದಲ್ಲಿ ಒಳ್ಳೆಯ ಪಾಂಡಿತ್ಯವಿದೆ." ಎಂದನು. ಸುರೇಂದ್ರನಿಗೆ ಜ್ಯೋತಿಷ್ಯದ ಮೇಲೆ ತುಂಬಾ ಆಸಕ್ತಿಯಿತ್ತು. ಅವನು ತನಗೆ ಜ್ಯೋತಿಷ್ಯ ಹೇಳಬೇಕೆಂದು ಸಿದ್ಧಾಂತಿಯನ್ನು ಕೇಳಿದನು. ಅದಕ್ಕೆ ಆ ಸಿದ್ಧಾಂತಿ, "ಭವಿಷ್ಯತ್ತಿನಲ್ಲಿ ನಡೆಯುವಂತಹುದನ್ನು ಮುಂದಾಗಿ ತಿಳಿದು ಏನು ಮಾಡಲಿಕ್ಕೂ ಮನುಷ್ಯರಿಂದಾಗದು. ನಡೆಯುವಂಥಾದ್ದು ನಡೆದೇ ತೀರುತ್ತದೆ. ನನ್ನ ಶಾಸ್ತ್ರವನ್ನು ನಾನು ಮಾನವರಿಗಾಗಿ ಉಪಯೋಗಿಸಬಾರದೆಂದಿದ್ದೇನೆ" ಎಂದನು.

"ಏನೂ ತಿಳಿಯದವನೂ ಸಹ ಇಂಥಾ ಮಾತು ಹೇಳ[illegible]ುದು" ಎಂದು ಸುರೇಂದ್ರನು ಕೆಣಕುವಂತೆ ಹೇಳಿದ[illegible]. ಅದರಿಂದ ಏನು ಪರಿಣಾಮವಾಯಿತೋ? ಸಿದ್ಧಾಂತಿ ಸ್ವಲ್ಪ ಹೊತ್ತು ಕಣ್ಣು ಮುಚ್ಚಿ ಆಮೇಲೆ ಹೇಳಿದನು: "ನೀವು ಬರುವುದಕ್ಕೆ ಮೊದಲು ಈ ಅರಣ್ಯಕ್ಕೆ ಅ[illegible] ಬದಿಯಲ್ಲಿರುವ ವಿದರ್ಭರಾಜ್ಯದ ಜಾತಕವನ್ನು ಪರಿಶೀಲಿಸಿಕೊಂಡಿದ್ದೆ. ಇನ್ನೊಂದು ವಾರದೊಳಗೆ ಆ ರಾಜ್ಯದೊಳಗೆ ದೊಡ್ಡದೊಂದು ಬದಲಾವಣೆಯಾಗುತ್ತದೆ. ಈಗ ಅದನ್ನೊಬ್ಬ ಅಸಮರ್ಥನೂ ದುಷ್ಟನೂ ಆದ ರಾಜನು ಪಾಲಿಸಿಕೊಂಡಿದ್ದಾನೆ. ಅವನು ಕೊಲೆಯಾಗಿ ಸಾಯುತ್ತಾನೆ. ಆದರೆ ಅವನನ್ನು ಕೊಂದವನು ರಾಜನಾಗದೆ

ವಿ. ಜಯರಾಂ

ಮತ್ತೊಬ್ಬನು ಸಿಂಹಾಸನವೇರುತ್ತಾನೆ. ಈ ನನ್ನ ಜ್ಯೋತಿಷ್ಯವು ಎಂದಿಗೂ ಸುಳ್ಳಾಗುವುದಿಲ್ಲ."

ಸುರೇಂದ್ರನು ಮತ್ತೇನೂ ಮಾತಾಡಲಿಲ್ಲ. ಜ್ಯೋತಿಷ್ಯದಲ್ಲಿ ಸ್ವಲ್ಪ ಕೂಡ ನಂಬುಗೆಯಿಲ್ಲದ ಸುಧೀರನಂತೂ ಬಾಯಿ ಬಿಚ್ಚಲೇ ಇಲ್ಲ. ಅಷ್ಟರಲ್ಲಿ ಮಳೆನಿಂತು ಆಕಾಶ ತಿಳಿಯಾಯಿತು. ಮಿತ್ರರಿಬ್ಬರೂ ಸಿದ್ಧಾಂತಿಗೆ ಹೇಳಿಕೊಂಡು ಅಲ್ಲಿಂದ ಮುಂದೆ ಹೊರಟರು. ಅರಣ್ಯವನ್ನು ದಾಟಿದ ಕೂಡಲೇ ಒಂದು ದೊಡ್ಡ ಬೀದಿ ಕಾಣಿಸಿತು. ಆ ದಾರಿ ಹಿಡಿದು ಒಂದು ದಿಕ್ಕಿಗೆ ಹೋದರೆ ವಿದರ್ಭವು ಬರುತ್ತದೆ. ಎರಡನೇ ದಿಕ್ಕಿನಲ್ಲಿ ಹೋದರೆ ಆ ಮಿತ್ರರು ಹೋಗಬೇಕಾದ ದೇಶಗಳು ಬರುತ್ತವೆ.

ಅಲ್ಲಿ ಸುರೇಂದ್ರನು ನಿಂತು ಸುಧೀರನೊಂದಿಗೆ, "ಮಿತ್ರಾ, ನನಗೆ ಆ ಸಿದ್ಧಾಂತಿ ಹೇಳಿದ ಜ್ಯೋತಿಷ್ಯವನ್ನು ಪರೀಕ್ಷೆ ಮಾಡಲೇಬೇಕೆನಿಸಿದೆ. ಈಗ ಇರುವ ವಿದರ್ಭದ ರಾಜನು ನಿರುಪಯೋಗಿ ಅನ್ನುತ್ತಾರಷ್ಟೆ? ಅವನ ಮೂಲಕ ಪ್ರಜೆಗಳು ಎಷ್ಟು ಕಷ್ಟಪಡುತ್ತಿರುವರೋ ತಿಳಿಯದು. ಇದೆಲ್ಲ ನಿಜವಾಗಿದ್ದರೆ ವಿದರ್ಭದ ದುಷ್ಟರಾಜನನ್ನು ನಾನೇ ಕೊಂದು ಪ್ರಜೆಗಳಿಗೆ ಒಳಿತಾಗುವ ಹಾಗೆ ಮಾಡುತ್ತೇನೆ" ಎಂದನು

ಅವನ ಮಾತು ಕೇಳಿ ಸುಧೀರನು ಶ್ಚರ್ಯಪಟ್ಟು, "ಬೈರಾಗಿಯ ಮಾತನ್ನು ನಂಬಿ ನೀನು ಇರುಕಿನಲ್ಲಿ ಸಿಕ್ಕಿಕೊಳ್ಳುವ ಕೆಲಸಕ್ಕೆ ತಲೆ ಹಾಕುವಿಯೇನು ? ಯಾವುದೋ ದೇಶದ ಪ್ರಜೆಗಳಿಗೆ ನಿನ್ನಿಂದೇನು ಒಳಿತಾದೀತು? ಈ ಹುಚ್ಚು ಆಲೋಚನೆ ಬಿಟ್ಟು ನಮ್ಮ ದಾರಿ ಹಿಡಿದು ಹೋಗೋಣ. ಒಂದು ವೇಳೆ ಆ ಬೈರಾಗಿಯ ಜ್ಯೋತಿಷ್ಯ ನಿಜವಾದರೂ ವಿದರ್ಭ ರಾಜನನ್ನು ಕೊಲ್ಲುವುದರಿಂದಾಗುವ ಫಲವು ನಿನಗಂತೂ ಸಿಗದು. ಮತ್ತಾವನೋ ರಾಜನಾಗುತ್ತಾನೆ. ವ್ಯರ್ಥಶ್ರಮ" ಎಂದನು. "ನನಗೆ ಅದರ ಫಲವೇನೂ ಬೇಡಬಿಡು. ಯಾರಿಗಾದರೂ ಒಳಿ



ತಾದರೆ ಸರಿ. ನೀನು ಹೋಗು, ನಾನು ಬೇಗದಲ್ಲಿ ಬಂದುಬಿಡುತ್ತೇನೆ" ಎಂದು ಹೇಳಿ ಸುರೇಂದ್ರನು ವಿದರ್ಭದ ದಾರಿಯಲ್ಲೇ ಹೋದನು.

ಅವನನ್ನು ನೋಡುತ್ತಾ ನಿಂತ ಸುಧೀರನಿಗೆ ಮಿತ್ರನನ್ನು ಹಾಗೆ ಬಿಟ್ಟು ಹೋಗಲು ಮನಸ್ಸಾಗಲಿಲ್ಲ. ಸುರೇಂದ್ರನು ಯಾವುದೋ ಭಯಂಕರವಾದ ಆಪತ್ತಿನಲ್ಲಿ ಸಿಕ್ಕಿಕೊಳ್ಳಲು ಹೋಗುತ್ತಾನೆಂದೇ ತೋರಿತು. ಅವನನ್ನು ಹೇಗಾದರೂ ಕಾಪಾಡಬೇಕಾದುದು ತನ್ನ ಧರ್ಮವೆಂದು ತೋರಿ, ಸುರೇಂದ್ರನು ಹೋದ ದಾರಿಯಲ್ಲೇ ನಡೆದನು. ಸುರೇಂದ್ರನಿಗೆ ತಿಳಿಯದಂತೆ ಅವನೂ ವಿದರ್ಭವನ್ನು ತಲಪಿದನು.

ಸುರೇಂದ್ರನು ನೆಟ್ಟಗೆ ವಿದರ್ಭ ರಾಜಧಾನಿಗೆ ಹೋಗಿ ಒಂದು ಛತ್ರದ ಕೋಣೆಯಲ್ಲಿ ತಂಗಿದನು. ಸುಧೀರನು ಆ ಛತ್ರವನ್ನು ಗುರುತಿಟ್ಟುಕೊಂಡು ವಿದರ್ಭದ ಮುಖ್ಯ ಮಂತ್ರಿಯಾದ ಕಾಲಕೇಶಿಯ ಮನೆಯನ್ನು ವಿಚಾರಿಸಿ ಅಲ್ಲಿಗೆ ಹೋದನು. ಕಾಲಕೇಶಿ



ಅವನನ್ನು ಬರಮಾಡಿಕೊಂಡು ಸಮಾಚಾರವೇನೆಂದು ಕೇಳಿದನು. ಸುಧೀರನು ತನ್ನ ಪರಿಚಯವನ್ನು ಅವನಿಗೆ ತಿಳಿಸಿ, ತನ್ನ ಮಿತ್ರನಾದ ಸುರೇಂದ್ರನ ಸಮಾಚಾರ ವನ್ನೂ ತಿಳಿಯಪಡಿಸಿದನು. ಅವನ ಎಲ್ಲಾ ಸಂಗತಿ ಯನ್ನೂ ಹೇಳಿ, "ನನ್ನ ಆ ಮಿತ್ರನ 'ಹುಚ್ಚು ಕುತೂಹಲ ತಣಿಯುವವರೆಗೆ, ಸುಮಾರು ಒಂದು ವಾರ ದಿನಗಳು ಅವನನ್ನು ಬಂಧನದಲ್ಲಿರಿಸಿ ಬಿಡಿ. ಆಮೇಲೆ ಅವನನ್ನು ಬಿಟ್ಟರೆ ಹೋಗಿಬಿಡುತ್ತಾನೆ. ಆ ಹುಚ್ಚು ಬೈರಾಗಿ ಹೇಳಿದ ಕಾಲಾವಧಿ ಮುಗಿದ ಮೇಲೆ ನನ್ನ ಮಿತ್ರ ನಿಮ್ಮ ರಾಜನನ್ನಾಗಲಿ, ಮತ್ತಾರನ್ನೇ ಆಗಲಿ ಕೊಲೆ ಮಾಡಲಾರನೆಂದು ನಾನು ಭರವಸೆ ಕೊಡುತ್ತೇನೆ. ಇಷ್ಟು ಮಾಡ ಬೇಕಾದುದೀಗ ಅಗತ್ಯ" ಎಂದನು.

"ನಮ್ಮ ರಾಜನನ್ನು ಕೊಲೆ ಮಾಡುವ ಪ್ರಯತ್ನ ದಲ್ಲಿರುವವನನ್ನು ಈ ಕ್ಷಣವೇ ಶಿರಚ್ಛೇದ ಮಾಡಿಸಿ ಬಿಡುತ್ತಿದ್ದೆ. ನೀನು ವಿಶ್ವಾಸದಿಂದ ನನ್ನ ಹತ್ತಿರ ತಿಳಿಸಿರುವುದನ್ನು ನೋಡಿ ಸುಮ್ಮನಿರುತ್ತೇನೆ, ಆಗಲಿ. ನಿನ್ನ ಇಚ್ಛೆಯಂತೆಯೇ ಕೆಲಸ ಮಾಡಿಸುತ್ತೇನೆ" ಎಂದ ಕಾಲಕೇಶಿ.

ಸುರೇಂದ್ರನ ಜೀವನಕ್ಕೆ ಯಾವ ಭಯವೂ ಇಲ್ಲ ವೆಂದು ಮಂತ್ರಿ ಪ್ರಮಾಣ ಮಾಡಿದ ಮೇಲೆ, ಅವನು ಯಾವ ಛತ್ರದಲ್ಲಿ ತಂಗಿರುವನೆಂಬುದೇ ಮುಂತಾದ ಚಹರೆಗಳನ್ನು ಸುಧೀರನು ಮಂತ್ರಿಗೆ ಹೇಳಿದನು. ಆಮೇಲೆ ಸುರೇಂದ್ರನು ಬಂಧನದಿಂದ ಮುಕ್ತನಾಗಿ ಬರುವವರೆಗೂ ಅವನು ಅಲ್ಲಿಯೇ ಇರಲು ನಿಶ್ಚಯಿಸಿ, ಇನ್ನೊಂದು ಛತ್ರದಲ್ಲಿ ತಾನು ತಂಗುವ ಏರ್ಪಾಡು ಮಾಡಿಕೊಂಡನು.

ಆದರೆ ಮರುದಿನ ಬೆಳಗ್ಗೆ ಅವನ ಕಿವಿಗೆ ಬಿದ್ದ ಸಮಾಚಾರವೇನಂದರೆ, ಸುರೇಂದ್ರನು ಕಳೆದ ರಾತ್ರಿ ಯಲ್ಲಿ ವಿದರ್ಭ ರಾಜನನ್ನು ಕೊಲೆ ಮಾಡಿ, ಭಟರ ಕೈಗೆ ಸಿಕ್ಕಿಕೊಂಡುಬಿಟ್ಟಿದ್ದನಂತೆ.

ಇಂತಹ ಪರಿಣಾಮವನ್ನು ಕೇಳಿ ಸುಧೀರನು ಹತಾಶನಾಗಿ ಹೋದನು. ಅವನು ಅವಸರವಾಗಿ ಮಂತ್ರಿ ಕಾಲಕೇಶಿಯ ಮನೆಗೆ ಹೋಗಿ, "ಇದೇನು ವಿಪರೀತ! ಹೀಗೆ ನಿಮ್ಮ ರಾಜನು ಕೊಲೆಯಾಗಿ ಸಾಯಬಾರದೆಂದಲ್ಲವೇ ನಾನು ಮುಂದಾಗಿ ನನ್ನ ಆ ಮಿತ್ರನನ್ನು ಬಂಧಿಸುವಂತೆ ಹೇಳಿದೆ. ಅವನನ್ನೇಕೆ ನೀವು ಕೂಡಲೇ ಬಂಧಿಸದೆ ಹೋದಿರಿ? ನಿಮ್ಮ ಅಲಕ್ಷ್ಯದಿಂದಲ್ಲವೇ ಇಂತಹ ಘೋರ ಪರಿಣಾಮ ವಾಯಿತು? ನಾನು ಹೇಳಿದಂತೆ ಮಾಡಲಾಗದಿದ್ದರೆ ಆಗಲೇ ಹೇಳಬಹುದಿತ್ತು. ನಾನು ಅದಕ್ಕೆ ಇನ್ನೊಂದು ಉಪಾಯ ಮಾಡುತ್ತಿದ್ದೆ" ಎಂದನು.

ಕಾಲಕೇಶಿ ತುಂಬಾ ಪಶ್ಚಾತ್ತಾಪವನ್ನು ಪ್ರದರ್ಶಿ ಸುತ್ತಾ, "ನಾನು ಆ ಕೂಡಲೇ ನೀನು ಹೇಳಿದ ಹಾಗೆಯೇ ಮಾಡಲು ಹೋದೆ. ಆದರೆ ನಿನ್ನ ಮಿತ್ರನು ನನ್ನ ಉಪಾಯ ಕಂಡುಹಿಡಿದು ಹೇಗೋ ತಪ್ಪಿಸಿಕೊಂಡುಬಿಟ್ಟ. ಅಷ್ಟು ಬೇಗ ಅವನು ಹೀಗೆ

ಮಾಡುತ್ತಾನೆಂದು ನನಗೆ ತೋರಲಿಲ್ಲ. ಅವನು ಯಾವ ಮಾಯೆಯಿಂದಲೋ ಮಹಾರಾಜರ ಮಲಗುವ ಕೋಣೆಗೆ ಹೊಕ್ಕು ರಾಜನನ್ನು ಕೊಲೆ ಮಾಡಿಬಿಟ್ಟ. ಇನ್ನು ಅವನಿಗೆ ಮರಣದಂಡನೆ ತಪ್ಪು ವಂತಿಲ್ಲ" ಎಂದನು.

ಸುಧೀರನಿಗೆ ದುಃಖ ಬಂದಿತು. ತನ್ನ ಸ್ನೇಹಿತ ಅನ್ಯಾಯವಾಗಿ ಮರಣ ದಂಡನೆ ಪಡೆಯುವನಲ್ಲಾ ಎಂದು ಮಲಮಲನೆ ಮರುಗಿದನು. ಅವನನ್ನು ಮರಣ ದಂಡನೆಯಿಂದ ತಪ್ಪಿಸುವ ಉಪಾಯ ವೇನಾದರೂ ಇದೆಯೇ ಎಂದು ತುಂಬಾ ಆಲೋಚನೆ ಮಾಡಿದನು. ತನ್ನ ಮಿತ್ರನ ಮರಣ ಶಿಕ್ಷೆಗೆ ತಾನೇ ಕಾರಣನಾದಂತೆ ಅವನಿಗೆ ತೋರಿತು.

ಕೆಲವು ದಿನಗಳು ಕಳೆಯುತ್ತಿರಲು ನಗರದಲ್ಲಿ ಇನ್ನೊಂದು ಸಮಾಚಾರ ಹರಡಿತು. ಮರುದಿನ ಮಂತ್ರಿ ಕಾಲಕೇಶಿ ಪಟ್ಟಾಭಿಷೇಕ ಮಾಡಿಕೊಳ್ಳುತ್ತಾನಂತೆ. ರಾಜನ ವಾರಸರಾರೂ ಇಲ್ಲದುದರಿಂದ ಹಿರಿಯರ ಅಭಿಪ್ರಾಯವನ್ನು ಅನುಮೋದಿಸಿ ಕಾಲಕೇಶಿಯೇ ರಾಜನಾಗುತ್ತಾನಂತೆ. ಅದೇದಿನ ರಾಜನನ್ನು ಕೊಲೆಮಾಡಿದ ಸುರೇಂದ್ರನಿಗೆ ಮರಣ ದಂಡನೆಯಂತೆ.

ಆ ದಿನ ಸುಧೀರನೂ ರಾಜಭವನಕ್ಕೆ ಹೋದನು. ಮಂತ್ರಿ ಕೂಡಿಸಿದ ಮಹಾ ಸಭೆಯಲ್ಲಿ ಭಾರೀ ಜನರ ಗುಂಪು ಸೇರಿತ್ತು. ಕಾಲಕೇಶಿ ಸಿಂಹಾಸನದ ಬದಿಯ ಒಂದು ಆಸನದ ಮೇಲೆ ಕುಳಿತಿದ್ದ. ಸಿಂಹಾಸನವು ಖಾಲೀಯಾಗಿದೆ. ಪಟ್ಟಾಭಿಷೇಕದ ವಸ್ತುಗಳೆಲ್ಲ ಸಿದ್ಧವಾಗಿದ್ದುವು.

ತುಂಬಿದ ಸಭೆಯಲ್ಲಿ ಸುರೇಂದ್ರನನ್ನು ಕೈಗಳನ್ನು ಕಟ್ಟಿದ ಸ್ಥಿತಿಯಲ್ಲಿ ತಂದು ನಿಲ್ಲಿಸಿದರು. ಮೊದಲು ಅವನ ಶಿರಚ್ಛೇದವೂ ಆಮೇಲೆ ಕಾಲಕೇಶಿಯ ಪಟ್ಟಾಭಿಷೇಕವೂ ನಡೆಯಬೇಕಾಗಿದ್ದುವು.

ಸುಧೀರನು ಕಾಲಕೇಶಿಯ ಸಮೀಪಕ್ಕೆ ಹೋಗಿ, "ಪ್ರಭುಗಳೇ, ರಾಜದ್ರೋಹಿಯ ತಲೆ ಕಡಿಯುವ ಅವಕಾಶವನ್ನು ನನಗೇ ಕೊಡಬೇಕೆಂದು ಕೇಳುತ್ತೇನೆ. ಅವನ ತಪ್ಪಿಗೆ ನಾನೇ ಶಿಕ್ಷೆ ಕೊಟ್ಟು ನನ್ನ ಬಾಧ್ಯತೆ



ತೀರಿಸಿಬಿಡುತ್ತೇನೆ. ನಾನೆಷ್ಟು ಹೇಳಿದರೂ ಕೇಳದೆ ಬಂದ ಈ ಮಿತ್ರನು ಇನ್ನೊಬ್ಬರ ಕೈಯಲ್ಲಿ ಸಾಯುವುದನ್ನು ನೋಡಲಾರೆ" ಎಂದನು.

ಅವನ ಕೋರಿಕೆಗೆ ಕಾಲಕೇಶಿ ಒಪ್ಪಿದ. ಸುಧೀಂದ್ರನು ಕತ್ತಿಯನ್ನೆತ್ತಿ ಸುರೇಂದ್ರನ ಬಳಿಗೆ ಒಂದಡಿ ಇಟ್ಟು, ಏನೋ ಸಂದೇಹ ಬಂದವನಂತೆ ಮತ್ತೆ ಕಾಲಕೇಶಿಯ ಕಡೆಗೆ ತಿರುಗಿ ಮಿಂಚಿನ ವೇಗದಲ್ಲಿ ಕತ್ತಿಯನ್ನು ಬೀಸಿ ಕಾಲಕೇಶಿಯ ತಲೆಯನ್ನು ಕಡಿದುಬಿಟ್ಟನು. ಆ ಕ್ಷಣದಲ್ಲಿ ಹಾಹಾಕಾರಗಳೂ ಅಲ್ಲೋಲ ಕಲ್ಲೋಲಗಳೂ ಏಳಬೇಕಾಗಿದ್ದ ಆ ಸಭೆಯಲ್ಲಿ ಸಾಸಿವೆಬಿದ್ದರೂ ಕೇಳಿಸುವಷ್ಟು ನಿಶ್ಶಬ್ದ! ರಾಜಭಟರು ತಲೆ ಬಗ್ಗಿಸಿ ನೆಲನೋಡುತ್ತಾ ಸುಮ್ಮನಿದ್ದರು. ಮರು ನಿಮಿಷದಲ್ಲಿ ಒಮ್ಮೆಲೇ ಹರ್ಷಧ್ವಾನಗಳೇಳ ತೊಡಗಿದುವು. "ದುಷ್ಟ ಕಾಲಕೇಶಿಯನ್ನು ಕೊಂದವನಿಗೆ ಜಯವಾಗಲಿ! ಹೊಸ ವೀರನಿಗೆ ಜಯ! ಜಯ!" ಎಂದು ಕೂಗುತ್ತ ಪ್ರಜೆಗಳು ಸಂತೋಷ ಪ್ರದರ್ಶನ ಮಾಡುತ್ತಿದ್ದರು. ಸುರೇಂದ್ರನೇ ವಿದರ್ಭಕ್ಕೆ ರಾಜನಾಗಿರಬೇಕೆಂದು ಸಭೆಯವರೆಲ್ಲಾ ಏಕಗ್ರೀವದಿಂದ ಒಪ್ಪಿ ನಿರ್ಣಯ ಮಾಡಿದರು. ಕೂಡಲೇ ಅವನ ಪಟ್ಟಾಭಿಷೇಕವೂ ನಡೆಯಿತು.

ಆಮೇಲೆ ಅವನು ತನ್ನ ಮಿತ್ರ ಸುಧೀರನನ್ನು ಆಲಿಂಗಿಸಿಕೊಂಡು, "ನೀನು ಕಾಲಕೇಶಿಯನ್ನು ಕೊಂದುದು ನನ್ನನ್ನು ರಕ್ಷಿಸಲಿಕ್ಕಾಗಿಯೋ ಅಥವಾ ಸಿದ್ಧಾಂತಿಯ ಮಾತನ್ನು ಸುಳ್ಳು ಮಾಡಲಿಕ್ಕಾಗಿಯೋ?" ಎಂದು ಕೇಳಿದ.

"ಆವೆರಡಕ್ಕೂ ಅಲ್ಲ. ಈ ಕಾಲಕೇಶಿಯ ರೀತಿ ನೀತಿ ಪ್ರವರ್ತನೆಗಳೆಲ್ಲ ನನಗೆ ಬಹಳ ಅನುಮಾನವನ್ನುಂಟು ಮಾಡಿದುವು. ಈ ದುಷ್ಟನು ತನ್ನ ರಾಜನನ್ನು ರಕ್ಷಿಸದೆ, ನೀನು ರಾಜನನ್ನು ಹತ್ಯ ಮಾಡಲು ಎಡೆ ಮಾಡಿಕೊಟ್ಟು, ನಿನ್ನ ಮೂಲಕವಾಗಿ ತಾನು ಸಿಂಹಾಸನ ಏರಬೇಕೆಂದು ಮಾಡಿದ್ದ. ಜ್ಯೋತಿಷ್ಯ ಆಗಲೇ ಸುಳ್ಳಾಯಿತು. ನೀನೇ ರಾಜನನ್ನೂ ಕೊಂದು, ನೀನೇ ರಾಜನೂ ಆದೆ." ಎಂದ ಸುಧೀರ.

ಸುರೇಂದ್ರನು ನಗಾಡುತ್ತ, "ಹಾಗಾಗಲಿಲ್ಲ ಮಿತ್ರಾ! ಆ ಸಿದ್ಧಾಂತಿ ಹೇಳಿದ ಮಾತು ಅಕ್ಷರಶಃ ನಿಜವಾಗಿದೆ. ರಾಜನನ್ನು ಕೊಂದದ್ದು ನಾನಲ್ಲ. ಕಾಲಕೇಶಿಯೇ. ರಾಜನು ದುಷ್ಟನೋ ಸುಷ್ಟನೋ ನೋಡಿದ ಮೇಲೆ ನಾನು ಕಾರ್ಯ ಮಾಡಬೇಕೆಂದಿದ್ದೆ. ಅಷ್ಟರೊಳಗೆ ಕಾಲಕೇಶಿ ರಾಜನನ್ನು ಕೊಂದು, ಅಪರಾಧವನ್ನು ನನ್ನ ಮೇಲೆ ಹಾಕಿದ" ಎಂದನು.

ಸುಧೀರನಿಗೆ ಆಶ್ಚರ್ಯವಾಯಿತು. ತಾನು ಕಾಲಕೇಶಿಯನ್ನು ಕೊಲ್ಲದೆ ಹೋಗಿದ್ದರೆ ಬೈರಾಗಿಯ ಮಾತು ಸುಳ್ಳಾಗುತ್ತಿತ್ತು. ಇದನ್ನು ನೆನೆದು ಸುಧೀರನು ಸಿದ್ಧಾಂತಿಯ ಜ್ಯೋತಿಷ್ಯಕ್ಕೆ ತಲೆ ಬಾಗಿದ.



# ತ್ಯಾಗಿ ಪನ್ನಾ



ರಾಜಾಸ್ಥಾನದ ಸುಪ್ರಸಿದ್ಧ ರಾಜ್ಯವಾದ ಮೇವಾಡ್, ೧೬ನೇ ಶತಕದ ಪ್ರಾರಂಭದಲ್ಲಿ ಸಂಗರಾಣಾನ ವಶದಲ್ಲಿತ್ತು. ಅವನು ಮಹಾ ಶೂರ, ತುಂಬ ಉದಾರಿ.



ದುರದೃಷ್ಟವಶದಿಂದ ಅವನ ಕುಮಾರರು ಅವನಿಗೆ ತಕ್ಕವರಾಗಿರಲಿಲ್ಲ. ರತ್ನನೆಂಬುವನು ಮತ್ತೊಬ್ಬ ರಾಜನೊಂದಿಗೆ ಯುದ್ಧ ಮಾಡಿ ಸತ್ತನು. ತಂದೆಯ ನಂತರ ರಾಜನಾದ ವಿಕ್ರಮಜಿತು ವಿಲಾಸ ಜೀವನದಿಂದ ಧನವನ್ನೂ ಕಾಲವನ್ನೂ ಹಾಳು ಮಾಡಿದನು.



ಮೇವಾಡದಲ್ಲಿ ಅರಾಜಕ ಪರಿಸ್ಥಿತಿಯುಂಟಾಯಿತು. ದಿಲ್ಲಿಯನ್ನಾಳುತ್ತಿದ್ದ ಮೊಗಲರಿಗೆ ಆ ರಾಜ್ಯವನ್ನು ಅಪಹರಿಸಬೇಕೆಂದು ಬುದ್ಧಿ ಹುಟ್ಟಿತು. ಈ ಪರಿಸ್ಥಿತಿಯಲ್ಲಿ ದರ್ಬಾರಿನಲ್ಲಿಯ ಕೆಲಮಂದಿ ಪ್ರಮುಖರು ಬನ್ವೀರ ಎಂಬುವನ ಸಹಾಯದಿಂದ ವಿಕ್ರಮಜಿತುವನ್ನು ರಾಜ್ಯಭ್ರಷ್ಟನನ್ನಾಗಿ ಮಾಡಲು ಪಿತೂರಿ ಮಾಡಿದರು. ಈ ಬನ್ವೀರು ವೀರಾಗ್ರೇಸರನಾದ ಪೃಥ್ವೀರಾಜನಿಗೆ ಹುಟ್ಟಿದ ಜಾರಪುತ್ರ.



ಬನ್ವೀರ್ ವಿಕ್ರಮಜಿತನ ಮೇಲೆ ಆಕಸ್ಮಿಕವಾಗಿ ಏರಿಬಂದನು. ಆತ್ಮರಕ್ಷಣೆ ಮಾಡಿಕೊಳ್ಳಲಾಗದೆ ವಿಕ್ರಮಜಿತು ಸತ್ತನು. ಅವನ ಮಿತ್ರರು ಓಡಿ ಹೋದರು.

ರಾಜನ ಮರಣ ವಾರ್ತೆ ರಾಜಭವನದಲ್ಲೆಲ್ಲಾ ಕೂಡಲೇ ಹರಡಿತು. ಅಳುವೂ, ಉಚ್ಚ ಕಂಠಗಳ ರೋದನ ಧ್ವನಿಗಳೂ ಎದ್ದುವು.





ವಿಕ್ರಮಜಿತನ ಮಗ ಹಸುಗೂಸಾದ ಉದಯ ಪನ್ನಾ ಎಂಬ ದಾಸಿಯ ರಕ್ಷಣೆಯಲ್ಲಿದ್ದ. ರಾಜ ಕುಮಾರನಷ್ಟೇ ವಯಸ್ಸಿನ ಮಗನೊಬ್ಬ ಪನ್ನಾ ಳಿಗೂ ಇದ್ದ. ಅಂತಃಪುರದೊಳಗೆ ಅವಳು ಇಬ್ಬ ರನ್ನೂ ಸಾಕುತ್ತಿದ್ದಳು.

ರಾಜನು ಕೊಲೆಗೊಂಡ ಸಂಗತಿ ಪನ್ನಾಳಿಗೆ ರಾಜಭವನದ ಸೇವಕನ ಮೂಲಕ ತಿಳಿಯಿತು. ಅವಳು ದಿಗ್ಭ್ರಮೆ ಹೊಂದಿದಳು. ಬನ್ವೀರ್ ರಾಜಕುಮಾರನನ್ನು ಹಿಡಿಯಲು ಅಂತಃಪುರದೊಳಗೆ ಬರುತ್ತಾನೆಂದೂ ಅವಳಿಗೆ ತಿಳಿಯಿತು.





ನಿಧಾನಿಸುವಂತಿಲ್ಲ. ಪನ್ನಾ ಆ ಸೇವಕನಿಗೆ ತಾನು ಹೇಳಿದಂತೆ ಮಾಡಲು ಹೇಳಿ ಒಪ್ಪಿಸಿದಳು. ರಾಜನ ಪಾಕಶಾಲೆಯಿಂದ ಕೊಳೆಕಸಗಳನ್ನು ಒಯ್ಯುವ ಬುಟ್ಟಿಯಲ್ಲಿ ಸೇವಕನು ರಾಜಕುಮಾರನನ್ನು ಅಡಗಿಸಿಟ್ಟು ಹೊರಗೆ ತೆಗೆದುಕೊಂಡು ಹೋದನು.

ಆದರೂ ದ್ರೋಹಿಯಾದ ಬನ್ವೀರನು ರಾಜಕುಮಾರನನ್ನು ಕೊಲ್ಲುವವರೆಗೂ ವಿಶ್ರಮಿಸಲಾರನೆಂದು ಪನ್ನಾಳಿಗೆ ಗೊತ್ತು. ಅವಳು ತನ್ನ ಮಗನನ್ನು ರಾಜಕುಮಾರನ ಹಾಸಿಗೆಯಲ್ಲಿ ಮಲಗಿಸಿ, ಎರಡನೆ ಹಾಸಿಗೆ ತೆಗೆದುಹಾಕಿದಳು.





ಅವಳು ಈ ಕೆಲಸ ಮಾಡಿದ ಮರುಕ್ಷಣದಲ್ಲಿ ಕ್ರೂರನಾದ ಬನ್ವೀರ್ ಅಲ್ಲಿಗೆ ಬಂದು, "ರಾಜಕುಮಾರನೆಲ್ಲಿ? ಬೇಗ ಹೇಳು!" ಎಂದು ಕತ್ತಿ ಹಿಡಿದುಕೊಂಡು ಪನ್ನಾಳನ್ನು ಕೇಳಿದ.



ಪನ್ನಾ ರಾಜಕುಮಾರನನ್ನು ರಕ್ಷಿಸಲು ಬದ್ಧ ಕಂಕಣಳಾದಳು. ರಾಜಕುಮಾರ ತಪ್ಪಿಸಿಕೊಂಡು ಹೋದನೆಂದರೆ, ಬನ್ವೀರ್ ಆಳುಗಳನ್ನು ಕಳುಹಿಸಿ ಹುಡುಕಿಸುತ್ತಾನೆ. ಹಾಗಾಗದಂತೆ ಅವಳು ಹಾಸಿಗೆಯಲ್ಲಿರುವ ತನ್ನ ಮಗನನ್ನೇ ತೋರಿಸಿದಳು. ಬನ್ವೀರ್ ಕತ್ತಿಯನ್ನು ಆ ಕಂದನ ಎದೆಯೊಳಗೆ ಹೊಗಿಸಿ, ನಡೆದುಬಿಟ್ಟ.



ಸೇವಕನು ನದೀ ತೀರದಲ್ಲಿ ಕಾದುಕೊಂಡಿದ್ದ. ಪನ್ನಾ ಬೇಗದಲ್ಲೇ ಅವನನ್ನು ಸಂಧಿಸಿದಳು. ಇಬ್ಬರೂ ಕೋಮಲ್ ಮೇರು ರಾಜಭವನಕ್ಕೆ ಹೋಗಿ ತಲುಪಿದರು. ಅಲ್ಲಿ ರಾಜಕುಮಾರನು ಉದಯಸಿಂಗ್ ಎಂಬ ಹೆಸರಿನಲ್ಲಿ ಬೆಳೆದು ದೊಡ್ಡವನಾಗಿ ಬನ್ವೀರನನ್ನು ಓಡಿಸಿಬಿಟ್ಟನು. ಚರಿತ್ರೆಯಲ್ಲಿ ಪನ್ನಾಳ ತ್ಯಾಗದಂತಹುದು ಬೇರೊಂದಿಲ್ಲ.

# ಕಥಾ ಶೀರ್ಷಿಕೆಯ ಸ್ಪರ್ಧೆ

## ಈ ಕಥೆಗೆ ಒಳ್ಳೆಯ ಶೀರ್ಷಿಕೆಯನ್ನು ಇಟ್ಟು ರೂ. ೨೫ ಗೆಲ್ಲಿರಿ!

## ?

ಒಬ್ಬ ದೊಡ್ಡ ಪಿಸುಣಾರಿ ಇದ್ದ. ಅವನು ತಾನು ತಿನ್ನುವುದೂ ಇಲ್ಲ, ಬೇರೆಯವರು ಒಂದು ಕಾಸು ಖರ್ಚು ಮಾಡಲಿಕ್ಕೆ ಬಿಡುವುದೂ ಇಲ್ಲ. ಇಂತಹ ತಂದೆಯ ಮೂಲಕವಾಗಿ ಅವನ ಮಗ ತುಂಬಾ ತೊಂದರೆ ಪಡುತ್ತಿದ್ದ. ಅವನ ತಲೆ ಕೂದಲು ದೊಡ್ಡ ಪೊದರಿನಂತೆ ಬೆಳೆಯಿತು. ಜುಟ್ಟು ಕತ್ತರಿಸಿಕೊಳ್ಳುವೆನೆಂದರೆ ತಂದೆ ಒಂದಾಣೆ ಸಹಾ ಕೊಡುವವನಲ್ಲ. ಹೊರೆಹುಲ್ಲಿನವನೆಂದು ಅವನ ಸ್ನೇಹಿತರು ಗೇಲಿ ಮಾಡುತ್ತಿದ್ದರು.

ಒಂದು ದಿನ ಮನೆ ಹಿಂದಿನ ಮರದಿಂದ ಒಂದು ತೆಂಗಿನ ಕಾಯಿ ಬಿತ್ತು. ಇದನ್ನು ನೋಡಿ ಮಗ ಆ ತೆಂಗಿನ ಕಾಯಿಯನ್ನು ಎತ್ತಿಕೊಂಡು, ಕೆಲಸಿಗನ ಬಳಿಗೆ ಹೋಗಿ, "ಇಗೋಪ್ಪ, ಈ ತೆಂಗಿನ ಕಾಯಿ ತೆಗೆದುಕೊಂಡು ನನ್ನ ತಲೆಗೂದಲು ಕತ್ತರಿಸಿಬಿಡಪ್ಪ" ಎಂದ.

ಅವನ ತಂದೆಯ ಲೋಭತ್ವ ಗೊತ್ತಿದ್ದುದರಿಂದ ಕೆಲಸಿಗ ತೆಂಗಿನ ಕಾಯಿ ತೆಗೆದುಕೊಂಡು ಮಗನಿಗೆ ಕ್ಷೌರ ಮಾಡಿ ಕಳುಹಿಸಿಕೊಟ್ಟ.

ತಂದೆ ಅವನನ್ನು ನೋಡಿದ ಕೂಡಲೇ, "ಕ್ಷೌರ ಮಾಡಿಸಿಕೊಂಡೆಯಲ್ಲಾ? ದುಡ್ಡು ಎಲ್ಲಿಂದಲೋ?" ಎಂದು ಕೇಳಿದ.

"ತೆಂಗಿನ ಕಾಯಿ ಮರದಿಂದ ಬಿತ್ತು. ಅದನ್ನು ಕೊಟ್ಟು ಕ್ಷೌರ ಮಾಡಿಸಿದೆ." ಎಂದ ಮಗ.

"ಅಯ್ಯೋ! ಅಯ್ಯೊ!, ಅದನ್ನು ಮಾರಿದ್ದರೆ ಮೂರಾಣೆ ಸಿಗುತ್ತಿತ್ತಲ್ಲಾ! ನನ್ನ ಮನೆ ಗುಂಡಾಂತರ ಮಾಡುವಿಯೇನೋ? ಹೀಗೆ ಮಾಡುವವನಾಗಿದ್ದರೆ ನಾನು ಮಾತ್ರ ಏಕೆ ಸೇರಿಸಿಡಬೇಕು?" ಎನ್ನುತ್ತಾ ಆ ಪಿಸುಣನು ಇಪ್ಪತ್ತು ವರ್ಷಗಳಿಂದ ಪೆಟ್ಟಿಗೆಯೊಳಗೆ ಭದ್ರವಾಗಿಟ್ಟಿದ್ದ ದುಪಟಿಯನ್ನು ತೆಗೆದು "ಇವತ್ತಿನಿಂದ ರಾತ್ರಿಯಲ್ಲಿ ನಾನು ಇದನ್ನು ಹೊದ್ದುಕೊಂಡು ಮಲಗಿದರೆ ಗೊತ್ತಾಗುತ್ತೆ! ಹುಂ" ಎಂದು ಮಗನನ್ನು ಬೆದರಿಸಿದನು.

★ ★ ★

ಮೇಲಿನ ಕಥೆಗೆ ಒಳ್ಳೆಯ ಹೆಸರನ್ನು ಆಲೋಚನೆ ಮಾಡಿ, ಪೋಸ್ಟುಕಾರ್ಡಿನಲ್ಲಿಯೇ ನಿಮ್ಮ ಹೆಸರು ವಿಳಾಸದೊಂದಿಗೆ ಬರೆದು "ಕಥಾ ಶೀರ್ಷಿಕೆಯ ಸ್ಪರ್ಧೆ" ಚಂದಮಾಮ, ೨ & ೩ ಆರ್ಕಾಟ್ ರೋಡು, ವಡಪಳನಿ, ಮದ್ರಾಸು - ೬೦೦೦೨೬ ಎಂಬ ವಿಳಾಸಕ್ಕೆ ಕಳುಹಿಸಿರಿ.

ಇದು ಜನವರಿ ೧೫ ರೊಳಗೆ ತಲಪಬೇಕು. ಅದರಲ್ಲಿ "ಫೋಟೋ ಶೀರ್ಷಿಕೆಯ ಸ್ಪರ್ಧೆ" ಬರೆದಿರಬಾರದು. ಫಲಿತಾಂಶ '೭೭ ಮಾರ್ಚಿ ಚಂದಮಾಮದಲ್ಲಿ ಪ್ರಕಟವಾಗುತ್ತದೆ.

---

ನವಂಬರ್ '೭೭ ರ ಸ್ಪರ್ಧೆಯ ಫಲಿತಾಂಶ: **ಮಂಕನಿಗೊಂದು ಮಂತ್ರಾಕ್ಷತೆ**

ಕಳುಹಿಸಿದವರು: ಪಿ. ಕಲ್ಲೇಶಪ್ಪ, ಹನುಮಂತಪುರ, ಸಿಂಗಟಗೆರೆ, ಕಡೂರು, ಚಿಕ್ಕಮಗಳೂರು.

# ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ ರೂ. ೨೫

## ಗೆದ್ದ ಶೀರ್ಷಿಕೆಗಳು ೧೯೭೭ ಮಾರ್ಚಿ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ



S. B. Takalkar

★



Nivas Jadhav

★ ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು.

★ ಜನವರಿ ೧೫ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ.

★ ನಮಗೆ ಬಂದ ಶೀರ್ಷಿಕೆಗಳಲ್ಲಿ ಅತ್ಯುತ್ತಮವಾದ ಒಂದು ಜತೆಗೆ ರೂಪಾಯಿ ೨೫ ಬಹುಮಾನ.

★ ಶೀರ್ಷಿಕೆಗಳನ್ನು ಪೋಸ್ಟುಕಾರ್ಡಿನಲ್ಲೇ ಬರೆಯಬೇಕು. ಅದರಲ್ಲಿ ಬೇರೆ ವಿಷಯ ಬರೆಯಬಾರದು. ವಿಳಾಸ: ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು - ೬೦೦೦೨೬

---

## ೧೯೭೬ ನವೆಂಬರ್ ತಿಂಗಳಿನ ಸ್ಪರ್ಧೆಯ ಫಲಿತ:

ಮೊದಲನೇ ಫೋಟೋ: ಬೇಡುವವರಿಬ್ಬರಾದರೂ...

ಎರಡನೇ ಫೋಟೋ: ನೀಡುವವನೊಬ್ಬನೇ

ಕಳುಹಿಸಿದವರು: ಯಂ. ದಿವಾಕರರಾವ್,

ಕೃಷ್ಣವಿಲಾಸ, ೯–೨೦–೩೭, ಮಡ್ಡಿಪೇಟೆ. ರಾಯಚೂರು.

Printed by B. V. REDDI at Prasad Process Pvt. Ltd., and Published by B. VISWANATHA



January 1977

# ಮಾಯಾಸರೋವರ

೧೨

[ಅಶ್ವಿಕ ಭಟರ ಮೂಲಕ ಜಯಶೀಲನಿಗೆ ಮಂತ್ರಿ ಧರ್ಮಮಿತ್ರನು ಅಲ್ಲಿಗೆ ಸಮೀಪದಲ್ಲಿ ಬಂದು ತಂಗಿರುವ ಸಂಗತಿ ಗೊತ್ತಾಯಿತು. ಮಕರಕೇತುವನ್ನು ಅಲ್ಲಿಗೇ ಸಾಗಿಸಿಕೊಂಡುಹೋದನು. ಇನ್ನು ತನಗೆ ಉಳಿಗಾಲವಿಲ್ಲವೆಂದು ಗ್ರಹಿಸಿದ ಮಕರಕೇತು, ತನ್ನ ಆನೆಗೆ ನೀರು ಕುಡಿಸುವ ನೆವನದಲ್ಲಿ ಕೆರೆಯೊಳಗೆ ಇಳಿಸಿ, ಆನೆಯ ಮೇಲಿದ್ದ ಜಯಶೀಲ ಮತ್ತು ಸಿದ್ಧಸಾಧಕರೊಂದಿಗೆ ಒಮ್ಮೆಗೇ ಆನೆಯನ್ನು ಮುಳುಗಿಸಿದನು.]

...ರಕೇತುವಿನ ವಿಚಿತ್ರ ವಾಹನವಾದ ಆ ಜಲ ...ವೆಂಬ ಆನೆ ನೀರಿನಲ್ಲಿ ಮುಳುಗಿದ್ದು ಮಾತ್ರವಲ್ಲ, ... ಮೇಲಿದ್ದವರನ್ನು ಅಲುಗಾಡಲು ಸಾಧ್ಯವಿಲ್ಲ ...ಷ್ಟು ಕಡು ವೇಗದಲ್ಲಿ ನೀರಿನೊಳಗೆ ಹೋಗುತ್ತಿತ್ತು. ...ಶೀಲನಿಗೂ ಸಿದ್ಧಸಾಧಕನಿಗೂ ಅದರಿಂದ ...ಗಡೆಯಾಗಿ ಮೇಲಕ್ಕೆ ತೇಲಿ ಬರುವ ಅವಕಾಶವೇ ...ಷ್ಟು ವೇಗವಿತ್ತು ಅದಕ್ಕೆ.

... ಆಕಸ್ಮಿಕ ಜಲಗಂಡದಲ್ಲಿ ತಮ್ಮ ಇತಿಶ್ರೀಯೂ ...ಯೋ ಅವರಿಗೆ ತೋರಿತು. ಜಯಶೀಲನು ... ಬುದ್ಧಿಗೇಡಿತನಕ್ಕೆ ತಲೆ ಚಚ್ಚಿಕೊಂಡನು. ಸಿದ್ಧ ಸಾಧಕನು "ಹೋ! ಮಹಾಕಾಳಾ!" ಎಂದು ಗಟ್ಟಿಯಾಗಿ ತನ್ನ ಇಷ್ಟದೈವವನ್ನು ನೆನೆದು ಕೂಗಿದನು.

ತನ್ನ ಹಿಂದೆಯೇ ಇರುವ ಅವನ ಕೂಗು ಜಯಶೀಲನಿಗೆ ಸ್ಪಷ್ಟವಾಗಿ ಕೇಳಿಸಿತು. ತನ್ನ ಮುಂದಿರುವ ಮಕರಕೇತು ಕೂಡಾ ಅವನ ಕಣ್ಣಿಗೆ ಸ್ಪಷ್ಟವಾಗಿ ಕಾಣುತ್ತಿದ್ದ. ಇದರಿಂದ ಜಯಶೀಲನಿಗೆ ಆಶ್ಚರ್ಯವೆನಿಸಿ ಯೋಚನೆ ಹರಿಯಿತು. ಹಾಗಾದರೆ ನೀರಿನ ಅಡಿಯಲ್ಲಿ ತನ್ನ ಶ್ರವಣ ಶಕ್ತಿ ದೃಷ್ಟಿ ಶಕ್ತಿಗಳಿಗೆ ಯಾವ ಕುಂದೂ ಬಂದಿಲ್ಲವೆಂದಾಯಿತು. ಇದು ಹೇಗೆ? ಕನಸೋ ನಿಜವೋ? ತಾನು ಹಿಡಿದ ಮಕರಕೇತುವೂ



12-4 243



ಜಲಗ್ರಹವೂ ತನ್ನನ್ನು ಬಂಧಿಸಿಕೊಂಡಂತೆ ಸ್ವೇಚ್ಛೆಯಾಗಿ ಓಡಾಡುತ್ತಿರುವುದು ಅನುಭವದ ಮುಂದಿರುವಾಗ ಕನಸು ಹೇಗಾದೀತು ?

ಜಯಶೀಲನು ಬುದ್ಧಿ ಮಂಕಾದವನಂತೆ, ಆವೇಶಗೊಂಡು ಮಕರಕೇತುವಿನ ಭುಜವನ್ನು ಹಿಡಿದು, "ಎಲೋ ದುಷ್ಟನೇ ! ಇದೆಂಥಾ ಕೆಲಸ ನಿನ್ನದು ? ನಾನು ಮನಸ್ಸು ಮಾಡಿದ್ದರೆ ಯಾವಾಗಲೋ ನಿನ್ನನ್ನು ಕೊಂದು ಹಾಕುತ್ತಿದ್ದೆ. ಅಂಥಾ ಕ್ರೂರ ನಾನಲ್ಲವೆಂದು ನಿನಗೆ ಗೊತ್ತಾಗಲಿಲ್ಲವೇನು? ಅದಕ್ಕೆ ಪ್ರತಿಫಲವಾಗಿ ನಮ್ಮನ್ನು ಹೀಗೆ ಕೊಲ್ಲಲು ನೋಡುವೆಯಾ ? ಏನು ನಿನ್ನ ಉದ್ದೇಶ ? ಕೊಲ್ಲುವ ಮೊದಲು ಸ್ಪಷ್ಟವಾಗಿ ಹೇಳಿಬಿಡು." ಎಂದನು. ನೀರಿನೊಳಗೆ ಮಾತೂ ಸ್ಪಷ್ಟವಾಗಿಯೇ ಹೊರಡುತ್ತಿತ್ತು.

ಮಕರಕೇತು ಗಟ್ಟಿಯಾಗಿ ನಗಲು ಬಾಯಿ ತೆರೆದು "ಅಯ್ಯೋ !" ಎಂದು ಹೊಟ್ಟೆ ಹಿಡಿದುಕೊಂಡು "ಆವೇಶ ಪಡಬೇಡ ಜಯಶೀಲಾ, ನಿನಗೇನಾದರೂ ಬುದ್ಧಿ ಭ್ರಮಣೆಯುಂಟಾಗಲಿಲ್ಲವಷ್ಟೆ ? ... ಕೆರೆಯ ನೀರಿನಲ್ಲಿ ತಾಳೇಮರದಷ್ಟು ಆಳದಲ್ಲಿ ... ಮನುಷ್ಯನಾಗಿರುವವನು ಇಷ್ಟೊಂದು ... ಶ್ವಾಸೋಚ್ಛ್ವಾಸ ಮಾಡಿಕೊಂಡಿರಬಲ್ಲ ... ಕೋಪಾವೇಶದಿಂದ ಮಾತಾಡ ಬಲ್ಲನೇ ? ... ನೋಡುವಾ !" ಎಂದನು.

ಈ ಪ್ರಶ್ನೆಗಳಿಗೆ ಜಯಶೀಲನ ಹಿಂದಿರುವ ... ಸಾಧಕನು ಆಶ್ಚರ್ಯದಿಂದ ಬಾಯಿಬಿಟ್ಟು, "ಮ... ಜಯಶೀಲಾ, ಇದೇನೋ ಅತ್ಯಾಶ್ಚರ್ಯವೇ ... ಕೆರೆಯಲ್ಲಿ ಸಮುದ್ರದಷ್ಟು ನೀರೇ ? ಇಷ್ಟಾ... ಇನ್ನೂ ಬದುಕಿದ್ದೇವೆ ! ಎಲ್ಲಾ ಆ ಮಹಾ... ದಯೆ !" ಎಂದ ಸುತ್ತಮುತ್ತಲೂ ನೋಡು... ಅವನಿಗೆ ನೀರಿನೊಳಗೆ ಎಲ್ಲಾ ಕಾಣುತ್ತಿತ್ತು.

ಆ ಬೆಟ್ಟದ ಕೆರೆಯ ಅಡಿ ಭಾಗದಲ್ಲಿರುವ ... ಬಗೆಯ ಜಲಚರ ಪ್ರಾಣಿಗಳು ಅವರ ಅಕ್ಕ... ಗಳಿಂದಲೇ ಈಜಿಕೊಂಡು ಹೋಗುತ್ತಿದ್ದುವು. ... ಗಳಲ್ಲಿ ದೊಡ್ಡ ದೊಡ್ಡ ಮೀನುಗಳು, ಮೊಸಳೆ... ಉದ್ದುದ್ದವಾದ ಹಾವುಗಳು ಚಿತ್ರವಿಚಿತ್ರವಾದ ... ಹಲವು ಬಗೆಯ ಜಲಜಂತುಗಳೂ ಅವರ ಕ... ಬಿದ್ದುವು. ಜಲಗ್ರಹವು ಯಾವುದನ್ನೂ ಲಕ್ಷ್ಯಮಾ... ತಲೆಯೆತ್ತಿ ನೇರವಾಗಿ ಹೋಗುತ್ತಲೇ ... ನೋಡ ನೋಡುತ್ತಿದ್ದಂತೆ ಎದುರಿನಲ್ಲಿ ಒಂದು ... ನೀರಿನ ಅಡಿಯಲ್ಲಿ ಬೆಟ್ಟದ ಗುಹೆಯೊಳಗಿನಿಂದ ... ರಾಶಿ ಭಾರಿ ಶಬ್ದದೊಂದಿಗೆ ಹೊರಗೆ ಉಕ್ಕಿಕೊಂ... ಬರುತ್ತಿದ್ದಿತು. ಆ ಸ್ಥಳವು ಮಹಾ ಅಲ್ಲಕಲ್ಲೋ... ವಾಗಿ ಮೈ ನಡುಗಿಸುವಂತಿದೆ !

ಮಕರಕೇತು "ಜಲಗ್ರಹಾ !" ಎಂದು ... ತನ್ನ ವಾಹನದ ತಲೆಗೆ ಕುಟ್ಟಿ ಸನ್ನೆ ಮಾಡಿದ... "ಜಯಶೀಲಾ, ಸಿದ್ಧ ಸಾಧಕಾ ! ಇಬ್ಬ... ಮಾತಾಡುವುದಿಲ್ಲವೇಕೆ ? ನೀರಿನ ಅಡಿಯಲ್ಲಿ... ನೀವು ಜೀವದಿಂದಿರುವ ಕಾರಣವು ಅರ್ಥವಾಯಿತೆ ?"

ದು ಕೇಳಿದ ಮಕರಕೇತು. ಜಯಶೀಲನು ವದಿಂದ ಸರ್ರನೆ ಕತ್ತಿಯನ್ನೆತ್ತಿ, "ಅರ್ಥ ಯಿತು. ನಿನ್ನನ್ನೂ ನಿನ್ನ ಜಲಗೃಹವನ್ನೂ ಅಂಟಿ ಡಿರುವವರೆಗೆ, ನಮಗೆ ಉಸಿರಾಡಿಸಿಕೊಂಡಿರಲು ಸಾಧ್ಯವಾಗುವುದೆಂದು ಗೊತ್ತಾಯಿತು. ಆದರೆ ಕ್ರೂರ ಯುವನೇ! ಸಾಯುವೆವೆಂದು ಹೆದರುವವರು ಲ್ಲ!" ಎಂದನು.

"ನಿನ್ನ ತಿಳುವಳಿಕೆ ಸರಿಯಾಗಿದೆ. ಹಾಗಾದರೆ ಯನ್ನೆತ್ತಿಕೊಂಡೆ ಏಕೇ?" ಎಂದು ಕೇಳಿದ ರಕೇತು.

"ನಿನ್ನ ತಲೆ ಕಡಿಯಲಿಕ್ಕೆ. ನೀನು ಈಗ ಜಲ ಹವನ್ನು ನೀರಿನ ಮೇಲೆ ಒಯ್ಯುವಿಯೋ ವೋ? ಒಯ್ಯದಿದ್ದರೆ ನಿನ್ನ ತಲೆ ಮುಂಡದಲ್ಲಿರ ದು. ನನ್ನ ಕತ್ತಿ ಸಾಮಾನ್ಯವಾದುದಲ್ಲ! ರ!" ಎಂದ ಜಯಶೀಲ ಕತ್ತಿ ಕುಣಿಸುತ್ತಾ.

ಅದೇ ವೇಳೆಯಲ್ಲಿ ಸಿದ್ಧಸಾಧಕನೂ ತನ್ನ ಶೂಲವ ತಿ, "ಜೈ ಮಹಾಕಾಳಾ! ನೀರಿನ ಬುಡದಲ್ಲಿ ಮಹಾಕಾಳನಿಗೆ ದೊಡ್ಡ ಬಲಿಯನ್ನು ಕೊಟ್ಟ ಭಕ್ತ ಈವರೆಗೆ ಯಾರೂ ಇರಲಿಕ್ಕಿಲ್ಲ. ಆ ಮಹಾ ಅವಕಾಶವು ನನಗೇ ಸಿಕ್ಕಲಿ. ಜಯಶೀಲಾ! ಅಪ್ಪಣೆ ಕೊಡು!" ಎಂದು ಶೂಲವನ್ನು ಮಕರಕೇತುವಿನ ಕುತ್ತಿಗೆಯ ಕಡೆಗೆ ಆಡಿಸಿದನು.

ಮಕರಕೇತು ನಗಲು ಬಾಯ್ತೆರೆದು, ಶೂಲದ ಮೊನೆ ಚುಚ್ಚಿಕೊಂಡುದರಿಂದ, ಕೈಯಿಂದ ಅದನ್ನು ಬದಿಗೆ ತಳ್ಳಿ, "ಮಹಾವೀರನಿಗೂ, ದೊಡ್ಡ ಮಹಾಕಾಲನ ಭಕ್ತನಿಗೂ ಬುದ್ಧಿ ಕೆಟ್ಟುಹೋಯಿತು. ನಾನು ಇನ್ನೆಷ್ಟು ಮಾತ್ರಕ್ಕೂ ಜಲಗೃಹವನ್ನು ನೀರ ಮೇಲಕ್ಕೆ ಸಾಗಿಸಿ ನಿಮ್ಮ ಬಂದಿಯಾಗಲಾರೆ. ಬಹುಶಃ ನಿನ್ನ ಆಜ್ಞೆಯನ್ನು ಮೀರುವುದಕ್ಕಾಗಿ ನೀನು ನನ್ನ ತಲೆ ಕಡಿಯುವಿಯೆಂದು ಕಾಣುತ್ತದೆ. ಆ ಮರು ಕ್ಷಣದಲ್ಲಿ ನಿಮಗಿಬ್ಬರಿಗೂ ನೀರಿನಲ್ಲಿ ಬದುಕಿರುವ ಶಕ್ತಿ ಹೋಗುತ್ತದೆ. ನಲವತ್ತು, ಐವತ್ತು ಅಡಿಗಳಷ್ಟು ಆಳದಿಂದ ನೀವು ಜೀವದೊಂದಿಗೆ ಮೇಲೇಳಲು ಸಾಧ್ಯವಿಲ್ಲ. ನಿಮ್ಮಿಬ್ಬರ ಶವಗಳಷ್ಟೇ ನೀರ ಮೇಲೆ





ತೇಲಬಹುದು ! ಅದನ್ನು ಯೋಚನೆ ಮಾಡಿ ನಿಮ್ಮ ಕೊಲೆ ನಡೆಸಿರಿ ! " ಎಂದನು.

ಜಯಶೀಲನೂ ಸಿದ್ಧಸಾಧಕನೂ ಒಬ್ಬರನ್ನೊಬ್ಬರು ನೋಡಿಕೊಂಡರು. ಅವನ ಮಾತು ಯಥಾರ್ಥವೇ ಆದುದರಿಂದ, ತಾವೀಗ ಅವನ ಬಂದಿಗಳಾಗಿರುವ ನಿಜವೂ ತಿಳಿಯಿತು. ತಮ್ಮ ಧೈರ್ಯವೂ ವೀರಪ್ರತಾಪಗಳೂ ವ್ಯರ್ಥವಾಗಿ ಹೋದುವು. ಈಗ ಇಬ್ಬರ ಮನಸ್ಸಿಗೂ ಭಯದ ಗಾಳಿ ಸೋಂಕಿತು.

ಈ ಸಮಯದಲ್ಲಿ ಜಲಗ್ರಹವು ನೀರಿನ ಪ್ರವಾಹವು ಧುಮುಕುತ್ತಿರುವ ಗುಹೆಯನ್ನೇ ಸಮೀಪಿಸುತ್ತಿರಲು, ಜಯಶೀಲನು ಕಿರಿಚುದನಿಯಲ್ಲಿ "ಹೋ ! ಮಕರಕೇತೂ ! ನೀನೀಗ ನಮ್ಮಿಬ್ಬರನ್ನೂ ಬಂದಿಯಾಗಿ ಹಿಡಿದುಕೊಂಡು ಎಲ್ಲಿಗೆ ಒಯ್ಯುತ್ತೀ? ಅದನ್ನಾದರೂ ಹೇಳಿಬಿಡು !" ಎಂದು ಕೇಳಿದ.

ಮಕರಕೇತು ಉತ್ತರಿಸುವುದರೊಳಗೆ ದೊಡ್ಡದೊಂದು ಮೊಸಳೆ ಒಂದು ಮಹಾ ಮೀನನ್ನು ಓಡಿಸುತ್ತಾ ಸಮೀಪಕ್ಕೆ ಬಂದಿತು. ಜಯಶೀಲನು ಕತ್ತಿಯಿಂದ ಆ ಮೊಸಳೆಯನ್ನು ತಿವಿಯಲು ನೋಡಿದನು. ಆಗ ಮಕರಕೇತು ಆ ಮೊಸಳೆಯ ಬಾಲವನ್ನು ಹಿಡಿದೆತ್ತಿ ಮೇಲಕ್ಕೂ ಕೆಳಕ್ಕೂ ಆಡಿಸಿ, ದೂರ ಹೋಗಿ ಬೀಳುವಂತೆ ಬೀಸಿಬಿಟ್ಟನು. ಬಳಿಕ "ಜಯಶೀಲಾ, ನೀವಿಬ್ಬರೂ ನನ್ನ ಬಂದೀಗಳಲ್ಲ. ಅದೋ, ಅಲ್ಲಿ ಕಾಣುವ ಗುಹೆಯೊಳಗೆ ಜಲಗ್ರಹವು ಹೋಗಿ ಬೆಟ್ಟದ ಮೇಲಿರುವ ಜಲಾಶಯವನ್ನು ತಲಪುತ್ತಲೇ ಅಲ್ಲಿಂದ ನೀವು ನಿಮ್ಮ ದಾರಿ ಹಿಡಿದು ಹೋಗಬಹುದು. ನಿಮ್ಮನ್ನು ಕೊಲ್ಲುವುದರಿಂದ ನನಗೇನೂ ಆಗಬೇಕಾದುದಿಲ್ಲ." ಎಂದನು.

ಮಕರಕೇತುವಿನ ಮಾತು ಮುಗಿಯುವುದಕ್ಕೂ ಜಲಗ್ರಹವು ಗುಹೆಯೊಳಗೆ ಪ್ರವೇಶಿಸುವುದಕ್ಕೂ ಸರಿಹೋಯಿತು. ಈಗ ನಾಲ್ಕು ಸುತ್ತಲೂ ಕಗ್ಗತ್ತಲು. ಜಯಶೀಲನು ತಾನು ಆನೆಯ ಮೇಲಿನಿಂದ ಜಾರಿ ನೀರಿನಲ್ಲಿ ಹೊಡೆದುಕೊಂಡು ಹೋಗಬಹುದೆಂಬ ಭಯದಲ್ಲಿ ಮಕರಕೇತುವಿನ ಸೊಂಟವನ್ನು ಹಿಡಿದುಕೊಂಡನು. ಸಿದ್ಧಸಾಧಕನು "ಹೋ ! ಮಹಾಕಾಳಾ ! ರಕ್ಷ ! ರಕ್ಷ !" ಎನ್ನುತ್ತಾ ಜಯಶೀಲನ ನಡುವನ್ನು ಸುತ್ತಿ ಹಿಡಿದುಕೊಂಡನು. ಏನೂ ತಿಳಿಯದಷ್ಟು ಜಲಾಂಧಕಾರವದು.

ನಾಲ್ಕಾರು ನಿಮಿಷಗಳಲ್ಲೇ ಜಲಗ್ರಹವು ಬೆಟ್ಟದ ಮೇಲಿನ ಜಲಾಶಯವನ್ನು ಸೇರಿಕೊಂಡಿತು. ಮಕರಕೇತುವಿನ ಆಜ್ಞೆಯಂತೆ ಜಲಗ್ರಹವು ನೀರಿನ ಮೇಲೆ ತೇಲಿ ಸೊಂಡಿಲನ್ನೆತ್ತಿ ದಿಕ್ಕುಗಳು ಪ್ರತಿಧ್ವನಿಸುವಂತೆ ಘೀಳಿಟ್ಟಿತು. ಇಬ್ಬರೂ ಆಕಾಶವನ್ನು ನೋಡಿ ಬದುಕಿನ ಮೇಲೆ ಆಶೆ ತಾಳಿದರು.

ಜಯಶೀಲನೂ ಸಿದ್ಧಸಾಧಕನೂ ಒಂದುಸಾರಿ ಬಲವಾಗಿ ಗಾಳಿಯನ್ನು ಹೀರಿಕೊಂಡು, ಜೀವದಿಂದುಳಿದು ವಾತಾವರಣ ನೋಡಿದುದಕ್ಕೆ ಸಂತೋಷಪಡುತ್ತ ನಾಲ್ಕು ಸುತ್ತಲೂ ನೋಡಿದರು. ನಾಲ್ಕು

ತ್ತಲೂ ಎತ್ತರವಾದ ಬೆಟ್ಟಗಳೇ. ಮಧ್ಯದಲ್ಲಿರುವ ವೆ ಪೂರಾ ಜಲಮಯ. ಒಂದು ಕಡೆಯಲ್ಲಿ ದ್ದ ಸೀಳಿಕೆಯಲ್ಲಿ ನೀರಿನ ಪ್ರವಾಹವು ಕವ ಡೆದು ಮತ್ತೊಂದು ಕಡೆಗೆ ವೇಗವಾಗಿ ಸಾಗು ತ್ತು. ಇದೇನಾದರೂ ಬೇರೆ ಲೋಕವಾಗಿರಬಹುದೆ?

ಇದನ್ನೆಲ್ಲಾ ನೋಡಿದ ಜಯಶೀಲನಿಗೆ ಒಂದು ಮಾನ ಉಂಟಾಯಿತು. ಮಕರಕೇತು ಆಗಾಗ "ರೋವರೇಶ್ವರಾ!" ಎಂದು ಕೂಗುತ್ತಿದ್ದನಷ್ಟೇ, ಸರೋವರವೇ ಇದಾಗಿರಬಹುದೆ? ಅವನ ರೋವರೇಶ್ವರನು ಇಲ್ಲೆಲ್ಲಾದರೂ ಇರುವನೆ?

ಜಯಶೀಲನು ತನ್ನ ಅನುಮಾನವನ್ನು ಮಕರ ತುವಿನೊಡನೆ ಹೇಳಿದನು. ಅದಕ್ಕೆ ಮಕರಕೇತು, "ನಿನ್ನ ಅನುಮಾನ ತಪ್ಪು. ನಮ್ಮ ರಾಜನಾದ ರೋವರೇಶ್ವರನಿರುವ ಸರೋವರವು ಇದಲ್ಲ. ದನ್ನು ನೋಡಿದ ಮಾನವ ಮಾತ್ರರು ಯಾರೂ ವರೆಗೂ ಆ ಸ್ಥಳದಿಂದ ತಿರುಗಿ ಬಂದಿಲ್ಲ. ರುವುದೂ ಸಾಧ್ಯವಿಲ್ಲ!" ಎಂದನು.

"ಹಾಗಾದರೆ ನಮ್ಮನ್ನು ಅಲ್ಲಿಗೇ ಕರೆದುಕೊಂಡು ಹೋಗುವೆಯಾ?" ಎಂದು ಕೇಳಿದ ಜಯಶೀಲ.

ಮಕರಕೇತುವಿನ ಬಾಯಿಯಿಂದ ಹೌದೆಂಬ ಉತ್ತರ ರಟ ಮರುಕ್ಷಣವೇ ಶೂಲದಿಂದ ಚುಚ್ಚಿಕೊಲ್ಲಲು ಸಾಧಕನು ಹಿಂದಿನಿಂದ ಅವನ ಬೆನ್ನಿಗೆ ನೇರಾಗಿ ಲವನ್ನು ಗುರಿ ಹಿಡಿದಿದ್ದನು. ಅದನ್ನು ಗಮನಿಸಿದ ಕರಕೇತು, ಸ್ವಲ್ಪ ಕೂಡಾ ಗಾಬರಿಯಾಗದೆ, "ವಿಬ್ಬರೂ ತುಂಬ ಅವಸರಬುದ್ಧಿಯವರು. ಕಾಡಿ ಲ್ಲಿ ಸುಮ್ಮ ಸುಮ್ಮನೆ ನನ್ನನ್ನು ಹಿಡಿದುಕೊಂಡು ಲ್ಲಾ ರಗಳೆಗಳಿಗೆ ಕಾರಣರಾದಿರಿ. ಪಕ್ಕೆಯಲ್ಲಿ ಕ್ಕ ಕತ್ತಿ ಸಾಲದ್ದಕ್ಕೆ ಆ ಬೇಡನಿಂದ ಬಾಣ ಡಿಸಿ ಭುಜದಲ್ಲಿ ಚುಚ್ಚಿಸಿದಿರಿ. ನಿಮಗೆ ಈಜಲು ರುವುದಷ್ಟೇ? ಹೆಚ್ಚು ದೂರ ಈಜಲು ಸಾಧ್ಯ ಗದಿದ್ದರೆ, ಬೆಟ್ಟದ ಮೇಲಿನಿಂದ ಉರುಳಿಕೊಂಡು



ಮರಗಳೋ ಕೊಂಬೆಗಳೋ ನೀರಿನೊಂದಿಗೆ ಬರುತ್ತವೆ. ಅಂತಹ ಏನಾದರೂ ಹಿಡಿದುಕೊಂಡು ಜೀವ ಕಾಪಾಡಿಕೊಳ್ಳಿ! ಇನ್ನು ನಿಮ್ಮ ಗೊಡವೆ ನನಗಿಲ್ಲ." ಎಂದವನೇ "ಹೋ! ಜಲಗ್ರಹಾ!" ಎಂದು ಕೂಗಿ ಆನೆಗೆ ಸನ್ನೆ ಮಾಡಿದನು.

ಜಲಗ್ರಹವು ಭೋಳಮ್ಮನೆ ನೀರಿನಲ್ಲಿ ಮುಳುಗಲು, ಜಯಶೀಲನು ಸಿದ್ಧಸಾಧಕನಿಗೆ ಸನ್ನೆ ಮಾಡಿ ಅವನೊಂದಿಗೆ ಆನೆಯಿಂದ ಮೇಲೆ ಹಾರಿ ನೀರಿಗೆ ಬಿದ್ದನು. ಬಳಿಕ ಇಬ್ಬರೂ ಈಜುತ್ತಾ, ನೀರಿನಲ್ಲಿ ತೇಲಾಡಿ ಬರುತ್ತಿದ್ದ ದೊಡ್ಡದೊಂದು ಮರವನ್ನು ಹೇಗೋ ಹಿಡಿದುಕೊಂಡರು.

ಅವರಿಬ್ಬರೂ ಹಾಗೂ ಹೀಗೂ, ನೀರಲ್ಲಿ ಬಿದ್ದೂ ಎದ್ದೂ ಅದರ ಕೊಂಬೆಗಳ ಮೇಲೆ ಹೋದರು. ಆ ಮರದ ಮೂರು ಕೊಂಬೆಗಳ ನಡುವೆ ಮರದ ಬೊಡ್ಡೆಯನ್ನು ಹಿಡಿದುಕೊಂಡು ಒಂದು ಹುಲ್ಲಿ ಕೌಚಿ ಮಲಗಿತ್ತು. ಅದು ಮುಂಗಾಲುಗಳಿಂದ ಮುರಿದ



ಕೊಂಬೆಗಳನ್ನು ಹಿಡಿದುಕೊಂಡಿತ್ತು. ಅದಕ್ಕೂ ಜೀವ ಭಯ. ಏನೋ ನೊಂದ ಹುಲಿ. ಅವರು ಹುಲಿಯನ್ನು ನೋಡುವುದಕ್ಕೂ ಹುಲಿ ಅವರನ್ನು ನೋಡುವುದಕ್ಕೂ ಮೇಳ ಕೂಡಿತು.

ಹುಲಿ ಗುರ್ರೆನ್ನುತ್ತ ಹಿಂದಿನ ಕಾಲಿನ ಮೇಲೆ ನಿಂತು ತುಸು ಸಮೀಪದಲ್ಲಿರುವ ಸಿದ್ಧಸಾಧಕನ ಮೇಲೆ ಧುಮುಕುವ ಹವಣಿಕೆಯಲ್ಲಿ ಬಾಲವನ್ನು ಕುಣಿಸ ತೊಡಗಿತು. ಅದು ತುಂಬ ಹಸಿದಿರಬಹುದು. ಸಾಧಕನು ತನ್ನ ಕೈಯಲ್ಲಿದ್ದ ಶೂಲವನ್ನು ಎತ್ತುವುದನ್ನು ನೋಡಿ ಜಯಶೀಲನು ಅವನನ್ನು ತಡೆದು, "ಸಾಧಕಾ, ಜಾಗ್ರತೆ! ಅದೂ ನಮ್ಮ ಹಾಗೆಯೇ ನೀರಿಗೆ ಬಿದ್ದು ತನ್ನ ಪ್ರಾಣವನ್ನು ಕಾಪಾಡಿಕೊಳ್ಳಲು ಈ ಮರದ ಮೇಲೇರಿಕೊಂಡಿದೆ. ಶೂಲದಿಂದ ತಿವಿದು ಬಿಟ್ಟರೆ ಅದು ನಿನ್ನನ್ನು ಕೆಡವಲು ನೋಡೀತು. ಪ್ರವಾಹದ ಸೆಳೆತದೊಂದಿಗೆ ನಿಮ್ಮಿಬ್ಬರ ಗುದಮುರಿಗೆಯಲ್ಲಿ ಮರವು ಮುಳುಗಿಬಿಟ್ಟರೆ, ಅಥವಾ ನಾವು ಹಾರಿಬಿಟ್ಟರೆ ಎಲ್ಲರಿಗೂ ಜಲಗಂಡವೇ ಆದೀತು!" ಎಂದನು. ಅವನು ಮಾತಾಡುವಾಗ ಹುಲಿ ಅ... ಕಡೆಗೆ ನೋಡ ತೊಡಗಿತು.

"ಅದು ನಿಜವೇ. ಆ ಹುಲಿ ನನ್ನ ಮೇ... ಹಾರುವ ಎತ್ತುಗಡೆಯಲ್ಲಿದೆಯಲ್ಲಾ! ... ಕಾಳನೇ ರಕ್ಷೆ!" ಎಂದು ಸಾಧಕನು ಶೂಲ... ಸಿದ್ಧವಾಗಿ ಹಿಡಿದು, ಅದರ ಮುಖವನ್ನೇ ತೀಕ್ಷ್ಣ... ನೋಡುತ್ತ, "ಜಯಶೀಲಾ, ನಾನೀಗ ತಲೆ ತಿರುಗಿ... ನೆಂದರೆ, ಹುಲಿ ನನ್ನ ಮೇಲೆ ಹಾರಿಬಿಡುತ್ತ... ಏನೋ ಭಯವಾಗುತ್ತದೆ." ಎಂದನು. "... ವಿರುವವರೆಗೂ ಧೈರ್ಯ ಬಿಡಬಾರದು. ಅದಕ್ಕೆ ... ಧ್ವನಿಯೂ ಕೇಳುವುದರಿಂದ ಸಮಸ್ಯೆಗ... ಕೊಂಡಿದೆ!" ಎಂದ ಜಯಶೀಲ.

"ಅಯ್ಯೋ! ಇನ್ನೇನೋ ಶಬ್ದ ಕೇಳಿಸುತ್ತದೆ. ... ಪ್ರವಾಹದ ನೀರು ಸಮೀಪದಲ್ಲೆಲ್ಲಿಯೋ ... ಯೊಳಗೆ ಬೀಳುವ ಶಬ್ದವಲ್ಲವೇ ಅದು? ... ಸಮೀಪದಲ್ಲೇ ಜಲಪಾತದೊಂದಿಗೆ ನಾವೂ ಬೀಳು... ವವ್ವೋ!" ಎಂದನು ತಡವರಿಸುತ್ತ ಸಿದ್ಧಸಾಧಕ.

ಜಯಶೀಲನೂ ಆಶ್ಚರ್ಯವೂ ಭಯವೂ ಮಿ... ವಾದ ಸ್ವರದಿಂದ, "ಸಾಧಕಾ, ನಾವೀಗ ಜಲಪ... ನೀರಿನಲ್ಲಿ ಸಿಕ್ಕಿಕೊಂಡು ಯಮನ ಬಾಯೊಳಗೆ ಬೀ... ವಂತೆ ಎಷ್ಟೆತ್ತರದಿಂದಲೋ ಬೀಳಲಿಕ್ಕಿದ್ದೇವೆ. ... ಇನ್ನೊಂದು ಇನ್ನೂರು ಮುನ್ನೂರು ಗಜ ... ವಿರಬಹುದು, ಅಷ್ಟೇ!" ಎಂದನು.

ಸಿದ್ಧಸಾಧಕನು ಭಯವಿಹ್ವಲನಾಗಿ, "ನಾ... ಕೆಳಗೆ ಬಿದ್ದು ನಜ್ಜು ಗುಜ್ಜಾಗಿ ಹೋಗುವುದ... ಮೊದಲೇ ಮರವನ್ನು ಬಿಟ್ಟು ನೀರಿಗೆ ಹಾರಿ... ಹೇಗೆ?" ಎಂದ.

"ಬೇಡ ಬೇಡ. ಮರದ ಆಧಾರದಲ್ಲಿ ನಾ... ಬದುಕುವ ಅವಕಾಶವಿದೆ. ಬಿಡಬೇಡ!" ಎಂ... ಕೂಗಿದ ಜಯಶೀಲ.

ಪ್ರವಾಹಕ್ಕೆ ತೀವ್ರ ಸೆಳೆತ ಬಂತು. ಹುಲಿ ಹೆದರಿ ಸಾಧಕನ ಮೇಲೆ ಎಗರುವುದಕ್ಕೂ, ಮರವು ನೊಂದಿಗೆ ಗಿರಿಕಿ ಹೊಡೆಯುತ್ತ ಜಲಪಾತದಲ್ಲಿ ಇನ್ನೂರಡಿ ಕೆಳಗಿನ ಕಣಿವೆಗೆ ಬೀಳುವುದಕ್ಕೂ ಹೋಗಿ ಯಾರಿಗೆ ಏನಾಯಿತೆಂದೇ ತಿಳಿಯಲಿಲ್ಲ. ಜಯಶೀಲನೂ ಸಿದ್ಧಸಾಧಕನೂ ಇವೇ ತಮ್ಮ ಯ ಕ್ಷಣಗಳೆಂದು ಗಟ್ಟಿಯಾಗಿ ಕಣ್ಣು ಮುಚ್ಚಿ ಡರು. ಜಲಪಾತವು ಬೀಳುವ ಸ್ಥಳದಲ್ಲಿ ಚಿಕ್ಕವೂ ಡ್ಡವೂ ಆದ ಅನೇಕಾನೇಕ ಗುಂಡುಗಲ್ಲು ದ್ದವು. ಮರದ ಮಧ್ಯಭಾಗವು ಅಂತಹುದೊಂದು ದ ಬಂಡೆಗೆ ಬಡಿದು ಮರವು ಎರಡು ಡಾಯಿತು. ಒಂದು ಭಾಗದಲ್ಲಿ ಜಯಶೀಲನೂ, ನ್ನೊಂದು ಭಾಗದಲ್ಲಿ ಸಿದ್ಧಸಾಧಕನೂ ಹುಲಿಯೂ ಕೊಂಡಿದ್ದರು.

ಜಯಶೀಲನ ಕೈಯಿಂದ ಮರದ ಪಟ್ಟು ತಪ್ಪಿತ್ತು. ಲ್ಲಿಯೋ ಬಿದ್ದಿರುವೆನೆಂಬ ಅರಿವಾಗಿ, ಸ್ವಲ್ಪ ತ್ತಿನ ಮೇಲೆ ಕಣ್ಣು ತೆರೆದನು. ಅವನು ಈಗ ನೀರಿನ ಬದಿಯಲ್ಲಿ ಬಿದ್ದಿದ್ದನು. ನೀರಿನ ಶಕ್ತಿ ಅವನನ್ನು ಬದಿಗೆ ತಳ್ಳಿತ್ತು. ಸೊಂಟದಿಂದ ಕೆಳ ಭಾಗವು ನೀರೊಳಗಿದೆ. ತಲೆ ಎತ್ತರವಾದ ಸ್ಥಳದ ಮಣ್ಣಿನ ಮೇಲಿದೆ. ದೂರದಲ್ಲಿ ಜಲಪಾತದ ಬೊಬ್ಬೆ ಕೇಳಿಸುತ್ತಾ ಇದೆ. ತಲೆಗೆ ಪೆಟ್ಟಾದಂತಿಲ್ಲ.

"ನಾನು ಬದುಕಿರುವೆನೆಂದಾಯಿತು. ಕೈಗಳೂ ಕಾಲುಗಳೂ ಸರಿಯಾಗಿವೆಯೋ? ಮುರಿದಿವೆಯೋ?" ಎಂದು ಕೊಳ್ಳುತ್ತಾ ಜಯಶೀಲನು ಪಕ್ಕಕ್ಕೆ ಹೊರಳಿದನು. ಬಲದ ಮೊಣಕೈ ನೋಯುತಿತ್ತು. ನಿಧಾನವಾಗಿ ಕಾಲುಗಳನ್ನು ಕದಲಿಸಿದನು. ಸ್ವಲ್ಪ ನೋವು ಕಾಣಿಸುತ್ತಿತ್ತು.

"ನಾನು ಅದೃಷ್ಟಶಾಲಿ. ಅಷ್ಟೆತ್ತರದಿಂದ ಬಿದ್ದು ಬದುಕಿದ್ದೇನೆ ಮಾತ್ರವಲ್ಲದೆ ಕಾಲೂ ಕೈಗಳೂ ಮುರಿಯಲಿಲ್ಲ. ಮುರಿದಿದ್ದರೆ ಇಲ್ಲಿ ಯಾರು ದಿಕ್ಕು? ನರಳಿ ನರಳಿ ಸಾಯಬೇಕಿತ್ತು!" ಎಂದುಕೊಂಡು ಕಾಪಾಡಿದ ದೇವರಿಗೆ ನಮಸ್ಕಾರ ಸಲ್ಲಿಸಿ ಎದ್ದು ನಿಂತು. ಕೈಕಾಲುಗಳಿಗಾದ ಗಾಯಗಳನ್ನು ನೋಡಿದನು.



ಒರೆಯಲ್ಲಿದ್ದ ಕತ್ತಿಯನ್ನು ಸವರಿದನು. ತನ್ನ ಚಲನ ವಲನ ಸರಿಯಾಗಿದೆಯೋ ನೋಡಿಕೊಳ್ಳಲು ಕೆಲವಡಿ ನಡೆದಾಡಿದನು. ಹಠಾತ್ತಾಗಿ ಸಿದ್ಧ-ಸಾಧಕನ ನೆನಪು ಬಂದು, "ಅವನೆಲ್ಲಿ?" ಎನ್ನುತ್ತಾ, ಜಲಪಾತದ ಪ್ರವಾಹದ ಕಡೆಗೆ ನೋಡಿದನು.

ಪ್ರವಾಹದ ಮಧ್ಯದಲ್ಲಿ ಅಲ್ಲಲ್ಲಿ ದೊಡ್ಡ ದೊಡ್ಡ ಬಂಡೆಗಲ್ಲುಗಳಿದ್ದುವು. ಜಯಶೀಲನು ಹಿಡಿದಿದ್ದ ಮರದಭಾಗವು ಎರಡು ದೊಡ್ಡ ಬಂಡೆಗಲ್ಲುಗಳ ಮಧ್ಯೆ ಸಿಕ್ಕಿಕೊಂಡಿತ್ತು. ಅದಕ್ಕಿಂತ ಕೆಳಗಡೆಯಲ್ಲಿ ಮರದ ಎರಡನೇ ಭಾಗವು ತೀರಕ್ಕೆ ಒಂದಿಕೊಂಡಿತ್ತು. ಆದರೆ ಸಿದ್ಧಸಾಧಕನು ಎಲ್ಲಿಯೂ ಕಾಣಲಿಲ್ಲ.

"ಪಾಪ, ಸಾಧಕನು ದುರದೃಷ್ಟದವನು! ಮಹಾ ಕಾಳನು ಅವನ ಕೈ ಬಿಟ್ಟಹಾಗಿದೆ. ಜಲಪಾತದಲ್ಲಿ ಬೀಳುವಾಗ ಯಾವ ಬಂಡೆಗೋ ತಗಲಿ, ಸತ್ತಿರ ಬೇಕು. ಶವವು ಪ್ರವಾಹದಲ್ಲಿ ಹೊಡೆದುಕೊಂಡು ಎಲ್ಲಿ ಹೋಯಿತೋ, ಯಾವುದರೆಡೆಗೆ ಸಿಕ್ಕಿ ಕೊಂಡಿತೋ? ಹೀಗೆಣಿಸುತ್ತಾ, ಅವನಿಗಾಗಿ ದುಃಖಿಸಿದ ಜಯಶೀಲ.

ಅನೇಕ ದಿನಗಳಿಂದ ತನಗೆ ಮಿತ್ರನಾಗಿ ಸಹಚರನಾಗಿ, ಕಷ್ಟಗಳಲ್ಲಿ ಭಾಗವಹಿಸುವವನಾಗಿದ್ದ ಸಾಧಕನ ಮೇಲೆ ಅವನಿಗೆ ತುಂಬಾ ಕನಿಕರವುಂಟಾಯಿತು. ಸಾಧಕನ ಶವವು ನೀರಲ್ಲಿ ನೆನೆದು ಯಾವ ಮೊಸಳೆಗೋ ಆಹಾರವಾಗುವುದಕ್ಕೆ ಮೊದಲೇ ಅದನ್ನು ಹುದು ಹಿಡಿದು ಒಳ್ಳೆಯ ರೀತಿಯಲ್ಲಿ ದಹನ ಸಂಸ್ಕಾ ಮಾಡಬೇಕೆಂದು ಅವನಿಗೆ ತೋರಿತು. ಶವವು ಎ ಯಾದರೂ ಬದಿಗೆ ಒಂದಿರಲೂಬಹುದು.

ಅಂತೆಯೇ ಅವನು ಬೇಗ ಬೇಗನೆ ಅಲ್ಲಿರು ಪೊದರುಗಳ ನಡುವೆ ದಾರಿ ಮಾಡಿಕೊಳ್ಳುತ್ತ ಸ್ವ ದೂರ ಹುಡುಕುತ್ತಾ ಹೋದನು. ಇದ್ದಕಿದ್ದ ಹು ಹುಲಿಯ ಗರ್ಜನೆ ಅವನ ಕಿವಿಗೆ ಬಿತ್ತು. ತಮ್ಮೊಂದಿ ಒಂದು ಹುಲಿಯೂ ಜಲಪಾತದಲ್ಲಿ ಬಿದ್ದಿರುವುದ ಈಗ ನೆನಪಿಗೆ ಬಂತು.

"ಸಾಧಕನನ್ನು ಹುಲಿ ತಿಂದಿರಲಾರದಷ್ಟೇ!" ಎಂದು ಕೊಳ್ಳುತ್ತ, ಜಯಶೀಲನು ಕತ್ತಿ ಹಿರಿ ಕೊಂಡು ಆತುರದಿಂದ ಆ ಧ್ವನಿ ಬಂದ ಕಡೆಗೆ ಬೇ ಬೇಗ ನಡೆದನು.

ಒಂದುಕಡೆ ಸಿದ್ಧಸಾಧಕನು ಚಲನವಿಲ್ಲದೆ ನೀರಿ ಬದಿಯಲ್ಲಿ ಅಂಗಾತ ಬಿದ್ದಿದ್ದಾನೆ. ಅವನಿಗೆ ತು ದೂರದಲ್ಲಿ ಹಿಂದಿನ ಕಾಲುಗಳೆರಡೂ ಮುರಿ ಹೋಗಿದ್ದ ಹುಲಿ, ಮುಂಗಾಲುಗಳನ್ನು ಎತ್ತಿ ಹಾಕುತ್ತ, ಸಣ್ಣಗಂಟಲಿನಿಂದ ಗಾಂಡ್ರಿಸುತ್ತ, ಸಾಧ ಬಳಿಗೆ ತೆವಳಿಕೊಂಡಿತ್ತು. ನೋವು ಸಂಕಟಗಳ ಬ ಹಸಿವೆಯ ಕಾಟದಿಂದ ಆ ಹುಲಿ ತುಂಬಾ ಬ ಹೋಗಿತ್ತು! (ಮುಂದುವರಿಯುವುದು)






# ವೀರಹನುಮಾನ್

## ೨೭. ರಾಮಲಕ್ಷ್ಮಣರ ಮೂರ್ಛೆ

ವಾನರರು ಧೈರ್ಯದಿಂದ ಸಾಹಸಕ್ಕಿಳಿದು ಸಾವಿರ ಸಂಖ್ಯೆಯಲ್ಲಿ ಒಗ್ಗಟ್ಟಾಗಿ ಕುಂಭಕರ್ಣನ ಮೇಲೆ ಧುಮುಕಿದರು. ಅವರು ಆ ಪರ್ವತಾಕಾರದ ಕುಂಭಕರ್ಣನ ದೇಹವನ್ನು ಸಿಕ್ಕಿದಲ್ಲಿ ಪರಚಿದರು, ಕಡಿದರು, ಕೊರೆದರು, ಗುದ್ದಿದರು; ಮೊಣಕಾಲು ಮೊಣಕೈಗಳಿಂದ ತಿವಿದರು. ಆದರೆ ಕುಂಭಕರ್ಣನು ರವಷ್ಟೂ ಲಕ್ಷ್ಯಮಾಡದೆ ವಾನರ ಸೇನೆಗಳನ್ನು ಜಾಡಿಸಿ, ಒಗೆಯುತ್ತ, ಒದೆಯುತ್ತ, ತಿನ್ನುತ್ತ, ನಿರ್ಮೂಲಿಸ ತೊಡಗಿದನು. ಈ ಪರಿಸ್ಥಿತಿಯಲ್ಲಿ ಕುಂಭಕರ್ಣನ ವಿಜೃಂಭಣೆಯನ್ನು ತಡೆಯಲು ವಾನರರಿಂದ ಸಾಧ್ಯವಿಲ್ಲವೆಂಬುದು ಸ್ಪಷ್ಟವಾಯಿತು. ಮತ್ತೆ ವಾನರರು ಭೀತಿಯಿಂದ ಕಿರಿಚುತ್ತ ಹಿಂದೆ ಹಿಂದೆ ಓಡ ತೊಡಗಿದರು.

ಆಗ ವಾನರ ಪ್ರಮುಖರು ಮುಂದೆ ಬಂದರು. ಅದನ್ನು ನೋಡಿ, ಓಡುವವರು ಮತ್ತೆ ಮುನ್ನುಗ್ಗಿದರು. ಅಂಗದನೂ ಸುಗ್ರೀವನೂ ಕುಂಭಕರ್ಣನ ಮೇಲೆ ಗುಡ್ಡಗಳನ್ನು ಎತ್ತೆತ್ತಿ ಬಿಸುಟರು. ಅವೆಲ್ಲ ಕುಂಭಕರ್ಣನಿಗೆ ತಾಗಿ ಪುಡಿಪುಡಿಯಾಗಿ ಬಿದ್ದುವೇ ಹೊರತು ಕುಂಭಕರ್ಣನಿಗೆ ಏನೂ ಆಗಲಿಲ್ಲ. ಒಮ್ಮೆಗೇ ಕುಂಭಕರ್ಣನು ಸುಗ್ರೀವನನ್ನು ನೋಡಿ, "ಓ, ವಾನರ ರಾಜನಲ್ಲವೇ ನೀನು?" ಎನ್ನುತ್ತಾ ಅವನ ಮೇಲೆ ಶೂಲವನ್ನು ಬಿಸುಟನು. ಆ ಶೂಲವನ್ನು ಹನುಮಂತನು ದಾರಿಯಲ್ಲೇ ಹಿಡಿದು ಮುರಿದು ಬಿಸುಟು ಕುಂಭಕರ್ಣನನ್ನು ಹಂಗಿಸಿದನು. ಇದನ್ನು ನೋಡಿ ವಾನರರು ಬಹಳ ಸಂತೋಷಪಟ್ಟು ಹಾರಿ ಕುಣಿದು ಸಿಂಹನಾದ ಮಾಡಿದರು.

ಆಗ ಕುಂಭಕರ್ಣನು ನೆಲ ಒಡೆಯುವ ಹಾಗೆ ಗರ್ಜಿಸಿ ಸುಗ್ರೀವನ ಮೇಲೊಂದು ಪರ್ವತ ಶಿಖರವನ್ನು ಎತ್ತಿ ಒಗೆದನು. ಅದರ ಏಟಿನಿಂದ ಸುಗ್ರೀವ ಮೂರ್ಛೆಬಿದ್ದ. ಅದನ್ನು ನೋಡಿ ರಾಕ್ಷಸರು ಅಟ್ಟಹಾಸದಿಂದ ಸಿಂಹನಾದ ಮಾಡಿದರು. ಕುಂಭಕರ್ಣನು ಮೂರ್ಛೆಬಿದ್ದ ಸುಗ್ರೀವನನ್ನು ಎತ್ತಿ ಭುಜದ ಮೇಲೆ ಹಾಕಿಕೊಂಡು ಲಂಕೆಯ ಕಡೆಗೆ ನಡೆಯ ತೊಡಗಿದನು. ಅದನ್ನು ನೋಡಿ ವಾನರರೆಲ್ಲ ಕೈಕೈ ಹಿಸುಕುತ್ತ ಕೂಗಾಡ ತೊಡಗಿದರು. ಸುಗ್ರೀವ



27—1



ನನ್ನು ಎತ್ತಿಕೊಂಡು ಹೋಗಿಬಿಟ್ಟರೆ ಎಲ್ಲಾ ವಾನರ ಸೇನೆಯೊಂದಿಗೆ ರಾಮಲಕ್ಷ್ಮಣರು ಹತವೀರ್ಯರಾಗಿ ಬಿಡುವರೆಂದು ಅವನು ಅಂದುಕೊಂಡನು. ಸುಗ್ರೀವ ನನ್ನು ಲಂಕೆಯ ಸೆರೆಯಲ್ಲಿಟ್ಟರೆ ಯುದ್ಧವೇ ಮುಗಿ ದಂತಾಗುವುದೆಂದು ಅವನ ನಂಬಿಗೆ. ಅಂತೆಯೇ ಬಹು ಸಂತೋಷದಿಂದ ಸಾಗುತ್ತಿದ್ದ ಕುಂಭಕರ್ಣ.

ಇದನ್ನೆಲ್ಲಾ ನೋಡುತ್ತಿದ್ದ ಹನುಮಂತನು ಕೂಡಾ ಏನೂ ಮಾಡದೆ ಸುಮ್ಮನೆ ಮುಗುಳ್ನಕ್ಕನು. ಮೂರ್ಛೆ ತಿಳಿಯುತ್ತಲೇ ಸುಗ್ರೀವನು ತನ್ನ ತಾನು ರಕ್ಷಿಸಿಕೊಳ್ಳುವನೆಂದು ಅವನಿಗೆ ಗೊತ್ತಿತ್ತು. ಆದುದ ರಿಂದ ಅವನು ಹೆದರಿ ಕೈಕಾಲುಗೆಟ್ಟ ವಾನರರಿಗೆ ಧೈರ್ಯ ಹೇಳುತ್ತಾ ಯುದ್ಧರಂಗದಲ್ಲೇ ವಿಹರಿಸಿ ಕೊಂಡಿದ್ದನು.

ಅವನು ಅಂದುಕೊಂಡ ಹಾಗೆಯೇ ಕುಂಭಕರ್ಣನ ಕೈಯಲ್ಲಿರುವ ಸುಗ್ರೀವನಿಗೆ ಮೂರ್ಛೆ ತಿಳಿದು ಎಚ್ಚರ ವಾಯಿತು. ತಾನು ಕುಂಭಕರ್ಣನ ಭುಜದ ಮೇಲಿರುವೆ ನೆಂದು ಅವನಿಗೆ ಗೊತ್ತಾಯಿತು. ಅವನಿಗೆ ಲಂಕಾ ನಗರದ ಬೀದಿಗಳು ಕಾಣಿಸಿದುವು. ಅವನು ಕುಂಭ ಕರ್ಣನ ಮೂಗನ್ನೂ ಕಿವಿಯನ್ನೂ ಕಚ್ಚಿ ಹರಿದು ಬಿಟ್ಟನು. ಕುಂಭಕರ್ಣನು ತನ್ನ ಮುಖದ ಕಡೆಯಿಂದ ನೆತ್ತರು ಸುರಿಯುವುದನ್ನು ನೋಡಿ, ಸಿಟ್ಟಿನಿಂದ ಸುಗ್ರೀವನನ್ನೆತ್ತಿ ನೆಲದ ಮೇಲೆ ಹೊಡೆದು ಕಾಲಿ ನಿಂದ ಒದೆದನು. ಆದರೆ ಸುಗ್ರೀವನು ಆ ಹೊಡೆತ ಹೊಡೆತಗಳಿಗೆ ಸಿಕ್ಕದೆ ಪುಟ ಚೆಂಡಿನಂತೆ ಆಕಾಶಕ್ಕೆ ಹಾರಿ ರಾಮನ ಬಳಿಗೆ ಹೋಗಿ ಸೇರಿದನು.

ಸುಗ್ರೀವನು ತಪ್ಪಿಸಿಕೊಂಡು ಹೋದ ಕೂಡಲೇ ಕುಂಭಕರ್ಣನು ತಿರುಗಿ ಯುದ್ಧಭೂಮಿಗೆ ಬಂದು ಅತ್ಯಾಕ್ರೋಶದಿಂದ ವಾನರರನ್ನು ಹಿಡಿದು ಹಿಡಿದು ಭಕ್ಷಿಸ ತೊಡಗಿದನು.

ಅದನ್ನು ನೋಡಿ ಲಕ್ಷ್ಮಣನು ಯುದ್ಧಕ್ಕೆ ಬಂದು ಕುಂಭಕರ್ಣನ ಮೇಲೆ ಬಾಣಗಳ ಮಳೆಯನ್ನು ಕರೆಯ ಲಾರಂಭಿಸಿದನು. ಕುಂಭಕರ್ಣನು ಅವುಗಳನ್ನು ಕೊಡರಿ ಕೊಳ್ಳುತ್ತಾ, "ಪುಡಿ ಕೋತಿಗಳೇ! ನೀವೆಲ್ಲಾ ಏಕೆ ಸಾಯುವಿರಿ? ಎಲ್ಲಿ ಆ ರಾಮ? ಅವನು ಬೇಗ ಬರಲಿ ನನ್ನ ಮುಂದೆ" ಎಂದು ಹುಂಕರಿಸುತ್ತಾ ರಾಮನ ಕಡೆಗೆ ತಿರುಗಿಹೋದನು.

ರಾಮನು ಮಹಾ ಧನುಸ್ಸಿನೊಂದಿಗೆ ಅವನ ಮುಂದೆ ನಿಂತು, "ಎಲೋ ಕುಂಭಕರ್ಣಾ, ನೀನು ಇಂದ್ರನನ್ನು ಜಯಿಸಿರಬಹುದು. ನಾನು ಇಂದ್ರನಲ್ಲ, ರಾಮ. ನಿನ್ನನ್ನು ಕ್ಷಣ ಮಾತ್ರದಲ್ಲಿ ಕೊಂದು ಹಾಕುತ್ತೇನೆ; ಇಷ್ಟದೈವವನ್ನು ಸ್ಮರಿಸಿ ಸಾಯಲು ಸಿದ್ಧನಾಗು" ಎಂದನು.

"ರಾಮಾ, ನಾನು ವಿರಾಧನಲ್ಲ ಕುಂಭಕರ್ಣ, ವಾಲಿಯೂ ಮಾರೀಚನೂ ನಾನಲ್ಲ. ಕುಂಭಕರ್ಣನ ಮುಂದೆ ನೀನೀಗ ನಿಂತಿರುವೆ. ಇನ್ನು ಮೇಲೆ ಯಾರ ಮುಂದೂ ನಿನ್ನ ಪರಾಕ್ರಮ ತೋರಿಸಲು ಸಾಧ್ಯವಿಲ್ಲ. ಈಗ ನನ್ನ ಮುಂದೆ ಮೊದಲು ತೋರಿಸಿಬಿಡು ನಿನ

ಪರಾಕ್ರಮ. ಆಮೇಲೆ ನಿನ್ನನ್ನು ಒಂದೇ ಬಾಯಿಗೆ ತಿಂದುತೀರಿಸುತ್ತೇನೆ" ಎಂದ ಕುಂಭಕರ್ಣ.

ರಾಮನು ಧನುಷ್ಟಂಕಾರ ಮಾಡಿ, ಸಾಲ ವೃಕ್ಷಗಳನ್ನು ಭೇದಿಸಲಿಕ್ಕೂ, ವಾಲಿಯನ್ನು ಕೊಲ್ಲಲಿಕ್ಕೂ ಉಪಯೋಗಿಸಿದ ಬಾಣಗಳನ್ನು ಕುಂಭಕರ್ಣನ ಮೇಲೆ ಪ್ರಯೋಗಿಸಿದನು. ಅವುಗಳಿಂದ ಕುಂಭಕರ್ಣನಿಗೆ ಏನೂ ಘಾಸಿಯಾಗಲಿಲ್ಲ. ಅದನ್ನು ನೋಡಿ ರಾಮನು ಅವನ ಮೇಲೆ ವಾಯುವ್ಯಾಸ್ತ್ರವನ್ನು ಪ್ರಯೋಗಿಸಿದನು, ಅದರಿಂದ ಕುಂಭಕರ್ಣನ ಒಂದು ಕೈ ಗದೆಯೊಂದಿಗೆ ತುಂಡಾಗಿ ಬಿದ್ದುಹೋಯಿತು.

ಕುಂಭಕರ್ಣನು ಕರ್ಕಶವಾಗಿ ಕೂಗಿ ಎರಡನೇ ಕೈಯಿಂದ ದೊಡ್ಡದೊಂದು ಮರವನ್ನು ಕಿತ್ತು ರಾಮನ ಮೇಲೆ ಬೀಸಬೇಕೆಂಬಷ್ಟರಲ್ಲಿ ರಾಮನು ಐಂದ್ರಾಸ್ತ್ರದಿಂದ ಅವನ ಎರಡನೇ ಕೈಯನ್ನು ಕೂಡಾ ಖಂಡಿಸಿದನು. ಆಗ ಕುಂಭಕರ್ಣನು ಬೊಬ್ಬಿರಿಯುತ್ತ ರಾಮನ ಮೇಲೆ ಹಾರಲು ಪ್ರಯತ್ನ ಮಾಡಿದ. ರಾಮನ ಬಾಣಗಳಿಂದ ಅವನ ಕಾಲುಗಳೂ ತುಂಡಾಗಿ ಬಿದ್ದುವು. ಕಡೆಗೆ ರಾಮನು ಒಂದು ಬಾಣದಿಂದ ಕುಂಭಕರ್ಣನ ಶಿರಸ್ಸನ್ನೂ ಕತ್ತರಿಸಿಬಿಟ್ಟನು.

ಕುಂಭಕರ್ಣನು ಸತ್ತು ಬಿದ್ದಕೂಡಲೇ ರಾಕ್ಷಸರು ಸರ್ವನಾಶವಾದವರಂತೆ ದುಃಖದಿಂದ ದೊಡ್ಡ ದನಿ ತೆಗೆದು ಅಳತೊಡಗಿದರು. ರಾಮನು ಅವರಿಗೆ ಘೋರ ಮೃತ್ಯುವಾಗಿ ಕಾಣಿಸಿದುದರಿಂದ ಹಲವರು ಎದೆಯೊಡೆದು ಸತ್ತರು, ಉಳಿದವರು ಓಡಿಹೋದರು. ವಾನರರು ಸಂಪೂರ್ಣ ನಿರ್ಭೀತರಾದರು ಎಲ್ಲರನ್ನೂ ಅಂಜಿಸಿದ ಕುಂಭಕರ್ಣನನ್ನು ಲೀಲಾಜಾಲವಾಗಿ ಕೊಂದ ರಾಮನ ಸುತ್ತಲೂ ವಾನರರು ಕೂಡಿ ಅವನನ್ನು ಪೂಜಿಸಿದರು.

ಕುಂಭಕರ್ಣನು ರಾಮನ ಕೈಯಲ್ಲಿ ಸತ್ತನೆಂಬ ಕೆಟ್ಟವಾರ್ತೆ ರಾಕ್ಷಸರ ಮೂಲಕವಾಗಿ ರಾವಣನಿಗೆ ತಿಳಿಯಿತು. ತಾನೆಷ್ಟೋ ನಂಬಿಕೊಂಡಿದ್ದ ಕುಂಭಕರ್ಣನ



ಗತಿ ಹಾಗಾದುದನ್ನು ಕೇಳಿ ರಾವಣನಿಗೆ ಮೂರ್ಛೆ ಬಂದಿತು. ಅವನ ಮಗಂದಿರಾದ ದೇವಾಂತಕ, ನರಾಂತಕ, ತ್ರಿಶಿರ, ಅತಿಕಾಯ ಎಂಬವರು ಗೋಳಾಡತೊಡಗಿದರು. ಅದರಂತೆ ಕುಂಭಕರ್ಣನ ಮರಣದಿಂದ ಸ್ವಂತ ಅಣ್ಣನನ್ನು ಕಳೆದುಕೊಂಡಂತೆ ಮಹೋದರ ಮಹಾ ಪಾರ್ಶ್ವರೂ ಅಳುತ್ತಿದ್ದರು. ಎಲ್ಲಿ ನೋಡಿದರೂ ರಾಕ್ಷಸರಾರೂ ಊಹಿಸಿರಲಾರದ ಘಟನೆಯಂತಿತ್ತು, ಕುಂಭಕರ್ಣನ ಮರಣ.

ಮೂರ್ಛೆಯಿಂದ ಎಚ್ಚರಗೊಂಡ ಮೇಲೆ ರಾವಣನು ಇನ್ನು ಲಂಕೆ ವಾನರರ ವಶವಾಗಿ ಹೋಗುವುದೆಂದು ಅಂಜಿದನು, ಅವನಿಗೆ ರಾಜ್ಯದೊಂದಿಗಿರುವ ಋಣವು ತೀರಿದಂತೆ ತೋರತೊಡಗಿತು. ಇನ್ನೀಗ ತಾನು ಮಹಾವೀರನೆನಿಸಿ, ಅಜೇಯನೆನಿಸಿ ಬದುಕಿದುದಕ್ಕೆ ರಾಮನನ್ನು ಕೊಂದು, ತಮ್ಮನ ಸಾವಿನ ಸೇಡನ್ನು ತೀರಿಸಿಕೊಳ್ಳಬೇಕೆಂದೂ, ಅದಾಗದಿದ್ದರೆ ಯುದ್ಧದಲ್ಲಿ ಸಾಯ



ಬೇಕೆಂದೂ ನಿಶ್ಚಯಿಸಿದನು. ವಿಭೀಷಣನ ಮಾತನ್ನು ಕೇಳದೆ ಅವನನ್ನು ದೂರ ಮಾಡಿಕೊಂಡುದಕ್ಕೂ ರಾವಣನಲ್ಲಿ ಪಶ್ಚಾತ್ತಾಪವೆದ್ದಿತ್ತು. ಆದರೆ ಅದರಿಂದ ಇನ್ನು ಯಾವ ಪ್ರಯೋಜನವೂ ಇರಲಿಲ್ಲ. ಕಾಲವು ಎಲ್ಲಾ ಅನುಕೂಲಗಳನ್ನೂ ಮೀರಿ ನಿಂತಿತ್ತು.

ರಾವಣನ ದುಃಖವನ್ನು ನೋಡಿ ತ್ರಿಶಿರನು, "ನಾವೆಲ್ಲಾ ಇರುವಾಗ ನಿರಾಶೆಯಿಂದ ದುಃಖಿಸುವುದೇಕೆ? ಮೂರು ಲೋಕಗಳನ್ನೂ ಜಯಿಸಬಲ್ಲವನಾದ ನೀನು ಇಷ್ಟೊಂದಕ್ಕೆಲ್ಲ ಅಧೈರ್ಯಪಡಬಹುದೆ? ನನ್ನನ್ನು ಯುದ್ಧಕ್ಕೆ ಕಳುಹಿಸಿ ನೋಡು. ನಾನು ರಾಮನನ್ನು ಕೊಲ್ಲದೆ ಹಿಂದಿರುಗಲಾರೆ" ಎಂದನು.

ಅವನ ಮಾತು ಕೇಳಿ, ದೇವಾಂತಕ, ನರಾಂತಕ, ಅತಿಕಾಯರಿಗೂ ಹುರುಪು ಹುರಿಗೊಂಡಿತು. ತಾವೂ ಯುದ್ಧಕ್ಕೆ ಹೋಗುತ್ತೇವೆಂದು ಅಪ್ಪಣೆ ಕೇಳಿದರು. ರಾವಣನು ಅವರ ಉತ್ಸಾಹವನ್ನು ನೋಡಿ ಸಂತೋಷಪಟ್ಟು, ಒಬ್ಬೊಬ್ಬರನ್ನೂ ಆಲಿಂಗಿಸಿ ಯುದ್ಧಕ್ಕೆ ಕಳುಹಿಸಿದನು. ಇಷ್ಟು ಮಂದಿ ಮಹಾವೀರರು ಒಟ್ಟಿಗೆ ಹೋಗುವುದರಿಂದ ತನಗೆ ಜಯವಾಗುವುದೆಂಬ ಆಶೆ ಮತ್ತೆ ರಾವಣನಲ್ಲೆದ್ದಿತ್ತು.

ಮತ್ತೆ ರಾಕ್ಷಸರಿಗೂ ವಾನರರಿಗೂ ದೊಡ್ಡ ಯುದ್ಧ ಹಿಡಿಯಿತು. ರಾಕ್ಷಸ ವೀರನಾದ ನರಾಂತಕನು ವಾನರರೊಂದಿಗೆ ಭಯಂಕರವಾಗಿ ಹೋರಾಡುತ್ತ ಬೀಭತ್ಸ ಮಾಡುವುದನ್ನು ನೋಡಿ ಅವನನ್ನು ಕೊಂದು ಬಿಡುವಂತೆ ಸುಗ್ರೀವನು ಅಂಗದನಿಗೆ ಹೇಳಿದನು. ಅಂಗದನು ನರಾಂತಕನೊಂದಿಗೆ ಸ್ವಲ್ಪ ಹೊತ್ತು ಯುದ್ಧ ಮಾಡಿ, ಕಡೆಗೆ ಅವನನ್ನು ಅಂಗೈಯಿಂದ ಅಪ್ಪಳಿಸಿ, ಮುಷ್ಟಿಯಿಂದ ಗುದ್ದಿ ಕೊಂದುಬಿಟ್ಟನು.

ಅದನ್ನು ನೋಡಿ ತ್ರಿಶಿರ, ಮಹೋದರ ಮತ್ತು ದೇವಾಂತಕರು ಮಹಾರೋಷದಿಂದ ಅಂಗದನ ಮೇಲೆ ಏರಿ ಬಂದರು. ಅಂಗದನು ಬಲು ಸಾಹಸದಿಂದ ಮೂವರು ರಾಕ್ಷಸರನ್ನು ಇದಿರಿಸಿ ಹೋರಾಡುತ್ತಿರುವುದನ್ನು ನೋಡಿ, ಹನುಮಂತನು ಅವನ ಸಹಾಯಕ್ಕೆ ಬಂದನು. ಹನುಮಂತನ ಒಂದು ಗುದ್ದಿನಿಂದ ದೇವಾಂತಕನು ಸತ್ತು ಬಿದ್ದುಬಿಟ್ಟ. ಹಾಗೆಯೇ ಅಂಗದನಿಗೆ ಸಹಾಯವಾಗಿ ಬಂದ ನೀಲನು ಆಕಾಶಕ್ಕೆ ಹಾರಿ ತಲೆಯ ಮೇಲೆ ಒದ್ದು ಗೋಣು ಮುರಿದು ಮಹೋದರನನ್ನು ಕೊಂದುಹಾಕಿದ.

ಮಹಾಪಾರ್ಶ್ವನೊಂದಿಗೆ ಋಷಭನು ಭಯಂಕರವಾಗಿ ಯುದ್ಧ ಮಾಡುತ್ತ ಕಡೆಗೆ ಅವನನ್ನು ಕೊಂದನು. ಹೀಗೆ ರಾಕ್ಷಸ ಮುಖಂಡರು ಸತ್ತ ಕೂಡಲೇ ಉಳಿದ ರಾಕ್ಷಸರು ಏನೂ ತೋರದೆ ಕಂಗೆಟ್ಟು ಆಯುಧಗಳನ್ನು ಬಿಟ್ಟು ಓಡಿಹೋದರು.

ಉತ್ಸಾಹದಿಂದ ಯುದ್ಧಕ್ಕೆ ಹೋದ ರಾಕ್ಷಸ ವೀರರು ಸತ್ತ ಸಂಗತಿ ತಿಳಿದು ಅತಿಕಾಯನು ಯುದ್ಧಕ್ಕೆ ಹೊರಟನು. ಜೀವಬಂದ ಪರ್ವತದಂತೆ ಬರುವ ಅತಿಕಾಯನನ್ನು ನೋಡಿ, ರಾಮನು ಆಶ್ಚರ್ಯದಿಂದ ವಿಭೀಷಣನೊಂದಿಗೆ, "ಈ ರಾಕ್ಷಸ



ವೀರನು ಯಾರು? ಕುಂಭಕರ್ಣನ ಸಂಬಂಧ ದವನೋ?" ಎಂದು ಕೇಳಿದನು.

"ಇವನು ರಾವಣನಿಗೆ ಧಾನ್ಯಮಾಲಿನಿಯಲ್ಲಿ ಹುಟ್ಟಿದ ಮಗ, ಅತಿಕಾಯನೆಂದು ಹೆಸರು. ಪ್ರತಾಪ ದಲ್ಲಿ ರಾವಣನಿಗೆ ಸಮಾನನಾದವನು. ಇವನು ಬ್ರಹ್ಮ ದೇವನ ಅನುಗ್ರಹ ಪಡೆದು ದಿವ್ಯಾಸ್ತ್ರಗಳನ್ನು ಸಂಪಾದಿಸಿದ್ದಾನೆ. ದೇವತೆಗಳಿಂದಲೂ ರಾಕ್ಷಸ ರಿಂದಲೂ ಸಾವು ಬರದಂತೆ ವರ ಪಡೆದಿದ್ದಾನೆ. ಅವನು ಧರಿಸಿದ ಕವಚವೂ, ಏರಿಕೊಂಡಿರುವ ಆ ರಥವೂ ಬ್ರಹ್ಮದೇವನೇ ಅವನಿಗೆ ಕೊಟ್ಟಂಥವು. ಇವುಗಳ ಸಹಾಯದಿಂದ ಇವನು ಅನೇಕ ಸಾರಿ ದೇವತೆ ಗಳನ್ನೂ ದಾನವರನ್ನೂ ಜಯಿಸಿ ರಾಕ್ಷಸರನ್ನು ರಕ್ಷಿಸಿ ದ್ದಾನೆ. ಈಗ ರಾವಣನ ಹೆಚ್ಚು ನಂಬಿಗೆ ಇವನ ಮೇಲೇ ಇದೆ. ಇವನನ್ನು ಸಾಧ್ಯವಾದಷ್ಟು ಬೇಗನೇ ಕೊಲ್ಲದಿದ್ದರೆ ವಾನರರ ಸಮೂಹಕ್ಕೆ ತೀವ್ರವಾದ ನಷ್ಟವನ್ನುಂಟುಮಾಡ ಬಲ್ಲನು." ಎಂದು ವಿಭೀಷ ಣನು ರಾಮನೊಂದಿಗೆ ಹೇಳಿದನು.

ಇಷ್ಟರೊಳಗೆ ವಾನರ ಸೇನೆಯ ಮೇಲೆ ಬಂದ ಅತಿಕಾಯನನ್ನು ಕುಮುದ, ದ್ವಿವಿದ, ಮೈಂದ, ನೀಲ, ಶರಭರು ಇದಿರಿಸಿ ಹೋರಾಡತೊಡಗಿದರು. ಅವರಿಂದ ಅವನನ್ನು ಏನು ಮಾಡಲೂ ಸಾಧ್ಯ ವಾಗಲಿಲ್ಲ; ಪ್ರತಿಯಾಗಿ ಅವನ ಬಾಣಗಳಿಂದ ಅವರೇ ತೀವ್ರವಾಗಿ ಬಾಧೆಪಡತೊಡಗಿದರು. ಮತ್ತೆ ವಾನರರು ಭೀತರಾಗಿ ಕಿರಿಚಾಡುವುದನ್ನು ರಾಮನು ನೋಡಿ ದನು. ವಿಭೀಷಣನ ಮಾತು ನಿಜವೆನಿಸಿತು.

ಅತಿಕಾಯನು ತನ್ನ ಮೇಲೆ ಬಾರದವರ ಗೊಡವೆಗೆ ಹೋಗದೆ, ನೆಟ್ಟಗೆ ರಾಮನ ಮುಂದೆ ಬರುತ್ತ, "ಓಡಿ ಹೋಗುವವರೊಂದಿಗೆ ಯುದ್ಧ ಮಾಡಲಾರೆ. ನನ್ನ ಮುಂದೆ ನಿಂತು ಧೈರ್ಯದಲ್ಲಿ ಯುದ್ಧ ಮಾಡುವವರು ಯಾರಾದರೂ ಇದ್ದರೆ ಬರಲಿ ಮುಂದೆ." ಎಂದು ಕೂಗಿ ಹೇಳಿದನು.

ಈ ಪ್ರಶ್ನೆಗೆ ಲಕ್ಷ್ಮಣನು ಕೆರಳಿ, ಅತಿಕಾಯನ ಮುಂದೆ ಬಂದು ಧನುಷ್ಟಂಕಾರ ಮಾಡಿದನು. ಅವ ನನ್ನು ನೋಡಿ ಅತಿಕಾಯನು, "ನೀನೇನು ಯುದ್ಧ ಮಾಡುವಿಯೋ ಲಕ್ಷ್ಮಣಾ? ಇನ್ನೂ ಚಿಕ್ಕವನಾದ ನಿನ್ನ ಪರಾಕ್ರಮವೆಂಥದು? ನನ್ನ ಮುಂದೆ ಸರಿ ಯಾಗಿ ನಿಲ್ಲಲಿಕ್ಕಾದರೂ ಸಾಧ್ಯವೇ? ಏಕೆ ಸುಮ್ಮನೆ ಸಾಯುವಿ? ನಡೆಯಾಚೆ! ನಿನ್ನ ಅಣ್ಣನಾದ ರಾಮ ನನ್ನೇ ಕಳುಹಿಸು." ಎಂದನು.

"ಶೌರ್ಯ ತೋರಿಸಬೇಕಾದುದು ಮಾತಿನಲ್ಲಲ್ಲ, ಕೈಯಲ್ಲಿ. ನಿನ್ನನ್ನು ನೀನೇ ಹೊಗಳಿಕೊಳ್ಳದೆ ನಿನ್ನಲ್ಲಿ ಪರಾಕ್ರಮವೇನಾದರೂ ಇದ್ದರೆ ನನ್ನ ಮೇಲೆ ತೋರಿಸು" ಎಂದ ಲಕ್ಷ್ಮಣ.

ಇಬ್ಬರೂ ಬಾಣಗಳಿಂದ ಯುದ್ಧವನ್ನು ಪ್ರಾರಂಭಿ ಸಿದರು. ಲಕ್ಷ್ಮಣನ ಬಾಣಗಳ ಏಟುಗಳನ್ನು ತಿಂದ ಮೇಲೆ ಅತಿಕಾಯನಿಗೆ ಅವನ ಮೇಲೆ ಸ್ವಲ್ಪ ಗೌರವ ವೇರ್ಪಟ್ಟು ಉತ್ಸಾಹದಿಂದ ಯುದ್ಧ ಮಾಡಿದನು.

27-5



ಇಬ್ಬರೂ ಒಬ್ಬರ ಮೇಲೊಬ್ಬರು ದಿವ್ಯಾಸ್ತ್ರಗಳನ್ನು ಪ್ರಯೋಗಿಸಿದರು. ಅತಿಕಾಯನ ಬಾಣಗಳು ಲಕ್ಷ್ಮಣನನ್ನು ನೋಯಿಸಿದುವು. ಲಕ್ಷ್ಮಣನು ಎಷ್ಟೇ ಶಕ್ತಿಯುತವಾದ ಬಾಣಗಳನ್ನು ಪ್ರಯೋಗಿಸಿದರೂ ಅತಿಕಾಯನ ಕವಚವನ್ನು ಕೂಡಾ ಭೇದಿಸಲಾರದೆ ಹೋದನು. ಆದುದರಿಂದ ಲಕ್ಷ್ಮಣನು ಒಂದು ದಿವ್ಯಾಸ್ತ್ರಕ್ಕೆ ಬ್ರಹ್ಮಾಸ್ತ್ರವನ್ನು ಮಂತ್ರಿಸಿ ಬಿಟ್ಟನು. ಅತಿಕಾಯನು ಅದನ್ನು ತಡೆಯಲು ಮಾಡಿದ ಪ್ರಯತ್ನಗಳು ಫಲಿಸಲಿಲ್ಲ. ಆ ಬಾಣವು ಅತಿಕಾಯನ ತಲೆಯನ್ನು ಕತ್ತರಿಸಿ ಹಾರಿಸಿಬಿಟ್ಟಿತು.

ಅತಿಕಾಯನು ಸಾಯಲು ರಾಕ್ಷಸರ ಶೋಕಕ್ಕೆ ಮೇರೆಯಿಲ್ಲದೆ ಹೋಯಿತು. ಈ ದುರ್ವಾರ್ತೆಯನ್ನು ರಾವಣನು ಕೇಳಿ ಸ್ತಂಭೀಭೂತನಾದನು. ದೊಡ್ಡ ದೊಡ್ಡ ರಾಕ್ಷಸ ವೀರರೆಲ್ಲ ರಾಮಲಕ್ಷ್ಮಣರ ಕೈಯಲ್ಲಿ ಒಬ್ಬೊಬ್ಬರಾಗಿ ಸತ್ತು ಹೋದರು. ತಾನು ನರವಾನರರನ್ನು ಲಕ್ಷ್ಯಕ್ಕೆ ತಾರದೇಹೋದುದಕ್ಕಾಗಿ, ಕಳೆದುಹೋದುದನ್ನು ನೆನೆದು ತುಂಬಾ ಹಳಹಳಿಸಿದನು. ತನ್ನ ತಂದೆ ಚಿಂತೆಯಲ್ಲಿ ಮುಳುಗಿರುವುದನ್ನು ನೋಡಿ ಇಂದ್ರಜಿತ್ತು, "ನಾನು ಬದುಕಿರುವಾಗ ನೀನು ಚಿಂತಿಸಬಹುದೇ? ಇದನ್ನು ನಾನು ನೋಡುತ್ತಿರುವುದೆಂದರೇನು? ನನ್ನ ಬಾಣಗಳ ಪೆಟ್ಟು ತಿಂದವನು ಬದುಕಿ ಉಳಿಯಲಾರ. ಈ ರಾಮಲಕ್ಷ್ಮಣರ ಪ್ರಾಣಗಳನ್ನು ನಾನು ತೆಗೆದುಬಿಡುತ್ತೇನೆ, ಈಗಲೇ ಯುದ್ಧಕ್ಕೆ ಹೊರಡುತ್ತೇನೆ, ಅಪ್ಪಣೆ ಕೊಡು" ಎಂದನು.

ರಾವಣನು ಇಂದ್ರಜಿತ್ತುವನ್ನು ಆಲಿಂಗಿಸಿ ಅಪ್ಪಣೆ ಕೊಟ್ಟು ಕಳುಹಿಸಿದನು. ತಂದೆಯ ಅನುಮತಿಯನ್ನು ತಲೆಯೊಳಾಂತ ಇಂದ್ರಜಿತ್ತು, ಹೇಸರ ಕತ್ತೆಗಳನ್ನು ಕಟ್ಟಿದ ರಥದ ಮೇಲೆ ಏರಿಕೊಂಡನು. ಅವನು ಯುದ್ಧ ಭೂಮಿಗೆ ಹೋಗುವಾಗ ಅನೇಕಮಂದಿ ರಾಕ್ಷಸಯೋಧರು ಬಗೆಬಗೆಯ ಆಯುಧಗಳನ್ನು ಧರಿಸಿಕೊಂಡು ಯುದ್ಧೋತ್ಸಾಹದ ಘೋಷಗಳನ್ನು ಮಾಡುತ್ತ ಅವನ ಹಿಂದೆ ಹೊರಟರು.

ಇಂದ್ರಜಿತ್ತು ಯುದ್ಧ ಭೂಮಿಯನ್ನು ಸಮೀಪಿಸಿದ ಮೇಲೆ ದಿವ್ಯವಾದ ರಥವನ್ನು ಸಂಪಾದಿಸಲಿಕ್ಕಾಗಿ ಒಂದು ಪ್ರತ್ಯೇಕ ಹೋಮ ಮಾಡಲು ನಿಶ್ಚಯಿಸಿದನು. ತನ್ನ ಸುತ್ತಲೂ ರಾಕ್ಷಸರನ್ನು ಕಾವಲು ನಿಲ್ಲಿಸಿದನು. ಆಮೇಲೆ ಮಂತ್ರೋಚ್ಚಾರ ಮಾಡುತ್ತ ಅಗ್ನಿಯನ್ನು ಉರಿಸಿ ಹವಿಸ್ಸುಗಳಿಂದ ಹೋಮ ಮಾಡ ತೊಡಗಿದನು. ಹೊಗೆಯಿಲ್ಲದ ಅಗ್ನಿ ದೊಡ್ಡ ಜ್ವಾಲೆಯನ್ನೆಬ್ಬಿಸಿ ಉರಿಯಿತು. ಹೋಮ ಮಾಡುತ್ತಾ ಅವನು ಬ್ರಹ್ಮಾಸ್ತ್ರವನ್ನು ಜಪಿಸಿ ತನ್ನ ಬಿಲ್ಲನ್ನೂ ರಥವನ್ನೂ ಇತರ ಆಯುಧಗಳನ್ನೂ ಹೋಮಾಗ್ನಿಯೊಂದಿಗೆ ಪೂಜಿಸಿದನು. ಹೋಮವನ್ನು ಮುಗಿಸಿ ತನ್ನ ದಿವ್ಯ ರಥದೊಂದಿಗೂ ಆಯುಧಗಳೊಂದಿಗೂ ರಥ ಸಾರಥಿಯೊಂದಿಗೂ ಆಕಾಶಕ್ಕೆ ಹಾರಿ ಅಂತರ್ಧಾನನಾದನು.

ರಾಕ್ಷಸರ ಸೇನೆ ಕುದುರೆಗಳೊಂದಿಗೆ ರಥಗಳೊಂದಿಗೆ ಯುದ್ಧ ರಂಗಕ್ಕೆ ಧಾವಿಸಿತು. ಆಮೇಲೆ ವಾನರ ರಾಕ್ಷಸರ ನಡುವೆ ನಿಕರ ಯುದ್ಧ ತೊಡಗಿತು. ರಾಕ್ಷಸರು ಬಗೆಬಗೆಯ ಆಯುಧಗಳಿಂದ ವಾನರರನ್ನು ಕೊಚ್ಚ ತೊಡಗಿದರು. ಇಂದ್ರಜಿತ್ತು ಅದೃಶ್ಯನಾಗಿದ್ದೇ ಅವರನ್ನು ಪ್ರೋತ್ಸಾಹಿಸುತ್ತಿದ್ದನು. ಮಾತ್ರವಲ್ಲ ಅವನೂ ಯುದ್ಧದಲ್ಲಿ ಕಾಯಕ ತೋರ ತೊಡಗಿದನು. ಅವನ ಒಂದೊಂದು ಬಾಣದೇಟಿಗೆ ಐದಾರು ಮಂದಿ ವಾನರರು ಸಾಯ ತೊಡಗಿದರು. ಸಾಧಾರಣ ವಾನರ ಸೇನೆಯವರನ್ನು ಮಾತ್ರವಲ್ಲದೆ, ಮುಖ್ಯ ಮುಖ್ಯ ರಾದ ವಾನರ ವೀರರೆಲ್ಲರನ್ನೂ ಇಂದ್ರಜಿತ್ತು ಕ್ರೂರ ವಾಗಿ ಹಿಂಸಿಸ ತೊಡಗಿದನು. ಗಂಧಮಾದನ, ನಲ, ಮೈಂದ, ಗಜ, ಸುಗ್ರೀವ, ಋಷಭ, ಅಂಗದ, ದ್ವಿವಿದ ಅಂತಹ ಮಹಾಮಹಾ ವಾನರಯೋಧರು ಇಂದ್ರ ಜಿತ್ತುವಿನ ಬಾಣಗಳ ಹತಿಯಿಂದ ತೀವ್ರ ವೇದನೆಗೆ ಗುರಿಯಾದರು. ಅದೃಶ್ಯನಾಗಿರುವ ಇಂದ್ರಜಿತ್ತು ವನ್ನು ನೋಡಲು ಸಾಧ್ಯವಾಗದೆ ಎಲ್ಲರೂ ಕಂಗಾಣದಾದರು.

ಇಂದ್ರಜಿತ್ತು ಪ್ರಯೋಗಿಸಿದ ಬಾಣಗಳು ರಾಮ ಲಕ್ಷ್ಮಣರಿಗೆ ಕೂಡಾ ತಾಗಿದುವು. ಆಗ ರಾಮನು ಲಕ್ಷ್ಮಣನೊಂದಿಗೆ "ಈ ಇಂದ್ರಜಿತ್ತು ಅದೃಶ್ಯನಾಗಿದ್ದು ಯುದ್ಧ ಮಾಡುತ್ತಿದ್ದಾನೆ. ಆದುದರಿಂದ ಅವನನ್ನು ಕಡು ಹಿಡಿದು ಕೊಲ್ಲಲು ಸಾಧ್ಯವಿಲ್ಲ. ನಾವು ಅವನ ಬಾಣಗಳ ಪೆಟ್ಟಿಗೆ ಬಿದ್ದುಬಿಟ್ಟಂತೆ ನಟಿಸಬೇಕು. ಆಗ ಅವನು ಸಂತೋಷದಿಂದ ಹೊರಟುಹೋಗಿ ಬಿಡುತ್ತಾನೆ" ಎಂದನು. ಹಾಗೆಯೇ ರಾಮಲಕ್ಷ್ಮಣರು ಬಾಣಗಳ ಪೆಟ್ಟಿಗೆ ನೊಂದು ಹಾಹಾಕಾರ ಮಾಡುತ್ತ ಬಿದ್ದು ಸ್ತಬ್ಧರಾದರು. ಅದನ್ನು ನೋಡಿ ಇಂದ್ರಜಿತ್ತು ಸಂತೋಷದಿಂದ ಸಿಂಹನಾದ ಮಾಡಿ ಲಂಕೆಗೆ ತಿರುಗಿ ಹೋದನು. ಇಂದ್ರಜಿತ್ತು ಪ್ರಯೋಗಿಸಿದ್ದು ಬ್ರಹ್ಮಾಸ್ತ್ರವೆಂದು ಹನುಮಂತನಿಗೆ ತಿಳಿಯಿತು. ಹನು




ಮಂತನಿಗೆ ಅದರಿಂದೇನೂ ಆಗಿರಲಿಲ್ಲ. ಆದರೆ ಅವನಿಗೆ ಚಿಂತೆಯಾಯಿತು. ಆ ಬಾಣಗಳ ಹತಿಯಿಂದ ಎಷ್ಟು ಮಂದಿ ವಾನರರು ಬದ್ಧರಾದರೋ, ಎಷ್ಟು ಮಂದಿ ಸತ್ತರೋ ನೋಡಬೇಕೆಂದು ಅವನು ವಿಭೀಷಣನೊಂದಿಗೆ ಹೇಳಿದನು.

ಹನುಮಂತನೂ ವಿಭೀಷಣನೂ ತಮ್ಮ ಕೈಯಲ್ಲಿ ಒಂದೊಂದು ಉರಿಯುವ ಕಟ್ಟಿಗೆಯನ್ನು ಹಿಡಿದು ಕೊಂಡು ಯುದ್ಧ ಭೂಮಿಯಲ್ಲೆಲ್ಲಾ ಹುಡುಕಾಡ ತೊಡಗಿದರು. ಒಂದುಕಡೆ ಜೀವದಿಂದಿರುವ ಜಾಂಬ ವಂತನನ್ನು ನೋಡಿದರು. ವಿಭೀಷಣನು ಅವನನ್ನು ಮಾತಾಡಿಸುತ್ತ," ಬದುಕಿರುವೆಯಷ್ಟೆ? " ಎಂದನು.

ಜಾಂಬವಂತನ ಕಣ್ಣುಗಳಿಗೆ ಪೆಟ್ಟಾಗಿತ್ತು. ಅವನು ವಿಭೀಷಣನೊಂದಿಗೆ, "ನಮ್ಮ ಹನುಮಂತ ಬದು ಕಿದ್ದಾನೆಯೇ ? " ಎಂದು ಕೇಳಿದ. "ರಾಮಲಕ್ಷ್ಮಣರ ಸಂಗತಿ ಕೇಳದೆ ಹನುಮಂತನನ್ನು ಕುರಿತು ಏಕೆ ಕೇಳುವೆ ? " ಎಂದು ವಿಭೀಷಣ ತಿರುಗಿ ಕೇಳಿದ.

"ಅಯ್ಯೋ, ವಿಭೀಷಣಾ, ಹನುಮಂತನೊಬ್ಬ ಬದುಕಿದ್ದು, ಉಳಿದ ವಾನರರೆಲ್ಲ ಸತ್ತರೂ ಅಷ್ಟೇನೂ ನಷ್ಟವಿಲ್ಲ. ಆದರೆ ಹನುಮಂತನು ಸತ್ತುಹೋದರೆ, ವಾನರ ಸೇನೆ ಪೂರಾ ಬದುಕಿದ್ದರೂ ನಾವೆಲ್ಲಾ ಸತ್ತವರ ಲೆಕ್ಕಕ್ಕೇ ಸೇರುತ್ತೇವೆ!" ಎಂದ ಜಾಂಬವಂತ.

ವೃದ್ಧ ಜಾಂಬವಂತನ ಮಾತು ಕೇಳಿ, ಹನುಮಂತನು ಮುಂದೆ ಬಂದು ಜಾಂಬವಂತನ ಎರಡು ಕಾಲುಗಳನ್ನೂ ಹಿಡಿದು ನಮಸ್ಕಾರ ಮಾಡಿದನು.

ಜಾಂಬವಂತನು ಅವನೊಂದಿಗೆ, "ಅಪ್ಪಾ, ಹನುಮಂತ, ಇಲ್ಲಿ ಬಿದ್ದಿರುವ ವಾನರರನ್ನೆಲ್ಲಾ ನೀನೇ ಕಾಪಾಡಬೇಕು. ಆ ಕೆಲಸಕ್ಕೆ ನಿನ್ನ ಹೊರತು ಬೇರೆ ಯಾರೂ ಶಕ್ತರಲ್ಲ" ಎಂದನು.

ತರುವಾಯ ರಾಮಲಕ್ಷ್ಮಣರ ಹಾಗು ಉಳಿದೆಲ್ಲರ ಮೂರ್ಛೆಯನ್ನು ಹೋಗಲಾಡಿಸಲು ಜಾಂಬವಂತನು ಹನುಮಂತನಿಗೆ ಒಂದು ಕೆಲಸ ಹೇಳಿದನು:

"ನೀನು ಸಮುದ್ರದ ಮೇಲಿನಿಂದಾಗಿ ಹಿಮಾಲಯಕ್ಕೆ ಹೋಗಬೇಕು. ಅಲ್ಲಿ ನಿನಗೆ ಅತ್ಯಂತ ಎತ್ತರವಾದ ಕೈಲಾಸ ಮತ್ತು ಕಾಂಚನಗಳೆಂಬ ಪರ್ವತಗಳು ಕಾಣುತ್ತವೆ. ಆ ಎರಡರ ಮಧ್ಯದ ಪರ್ವತಗಳಲ್ಲಿ ಓಷಧೀ ಪರ್ವತವೊಂದಿದೆ. ಅದರ ಶಿಖರದ ಮೇಲೆ ದಿವ್ಯವಾದ ವಿಶಲ್ಯಕರಣಿ, ಮೃತ ಸಂಜೀವಿನಿ, ಸೌವರ್ಣಕರಣಿ, ಸಂಧಾನಕರಣಿ ಎಂಬ ಔಷಧಗಳಿವೆ. ಈ ನಾಲ್ಕು ಔಷಧಗಳನ್ನೂ ನೀನು ತೆಗೆದುಕೊಂಡು ಬರಬೇಕು. ಅವುಗಳಿಂದ ವಾನರರನ್ನು ಬದುಕಿಸಿ ಆರೋಗ್ಯವಂತರನ್ನಾಗಿ ಮಾಡಬಹುದು."

ಹನುಮಂತನು ಜಾಂಬವಂತನಿಂದ ಆ ಔಷಧಿಗಳ ಗುರುತು ಲಕ್ಷಣಗಳನ್ನು ತಿಳಿದುಕೊಂಡು ಆಕಾಶದಲ್ಲಿ ವಾಯುಮಾರ್ಗದಲ್ಲಿ ಅಲ್ಲಿಗೆ ಹೊರಟನು. ಅವನು ಸಮುದ್ರವನ್ನೂ, ಪರ್ವತಗಳನ್ನೂ, ನದಿಗಳನ್ನೂ ಅರಣ್ಯವನ್ನೂ ದಾಟುತ್ತ ಹಿಮವತ್ಪರ್ವತದ ಕಡೆಗೆ ಮಿಂಚಿನ ವೇಗದಲ್ಲಿ ಸಾಗಿದನು.

ಹಿಮಾಲಯದಲ್ಲಿ ಒಂದಕ್ಕಿಂತ ಒಂದು ಎತ್ತರವಾದ ಶಿಖರಗಳೂ, ಆಶ್ರಮಗಳೂ ಕಂಡುಬಂದುವು. ಬ್ರಹ್ಮಕೋಶ, ಕೈಲಾಸ ಪರ್ವತ, ಇಂದ್ರನು ತಪಸ್ಸು ಮಾಡಿದ ಸ್ಥಳ, ರುದ್ರಬಾಣ ಮೋಕ್ಷಸ್ಥಾನ, ಹಯಗ್ರೀವ ಕ್ಷೇತ್ರ, ಬ್ರಹ್ಮಕಪಾಲ, ಮೊದಲಾದ ಪ್ರದೇಶಗಳನ್ನೂ ಅವನು ನೋಡಿದನು. ಇಂದ್ರನಿಗೆ ಬ್ರಹ್ಮನು ವಜ್ರವನ್ನು ಕೊಟ್ಟ ಪ್ರದೇಶವನ್ನೂ, ಕುಬೇರನ ಸ್ಥಾನವನ್ನೂ, ಬ್ರಹ್ಮನ ಆಸನವನ್ನೂ, ಶಿವಧನುಕ್ಷೇತ್ರವನ್ನೂ, ಪಾತಾಳ ಬಿಲವನ್ನೂ ಹನುಮಂತನು ನೋಡಿದನು. ಹೀಗೆ ಹುಡುಕುತ್ತಿರಲು ಕಡೆಗೆ ಕೈಲಾಸ ಪರ್ವತಕ್ಕೂ ಋಷಭ ಪರ್ವತಕ್ಕೂ ನಡುವಿನಲ್ಲಿರುವ ಔಷಧಿಯಬೆಟ್ಟ ಅವನ ಕಣ್ಣಿಗೆ ಬಿತ್ತು. ಅದರ ಮೇಲೆ ಔಷಧಿಗಳು ಜಳಜಳನೆ ಬೆಳಗಿಕೊಂಡಿದ್ದವು.

